# ಶುಭ-ಆಶೀರ್ವಾದಗಳು



**ಪರಮ ಪೂಜ್ಯ ಸದ್ಗುರು ನಾರಾಯನಾಂದ ತೀರ್ಥ ಮಹಾಸ್ವಾಮಿಗಳು**

ಶ್ರೀ ಕ್ಷೇತ್ರ ಔದುಂಬರ, ತಾಲೂಕ ಪಲುಸ, ಜಿಲ್ಲಾ ಸಾಂಗ್ಲಿ - 416320, ಮಹಾರಾಷ್ಟ್ರ

ಪೂರ್ವಾಶ್ರಮ

**ಶ್ರೀ ವೇದಮೂರ್ತಿ ತಿಮ್ಮಣ್ಣ ನರಸಿಂಹ ದಿಕ್ಷಿತ, ಒಣಿಕೈ,**

(02/09/1886 - 15/02/1968)

ಪೋಸ್ಟ: ಪಂಚಲಿಂಗ, ತಾಲೂಕ : ಶಿರಸಿ, ಉತ್ತರಕನ್ನಡ 581403 ಕರ್ನಾಟಕ

ಶ್ರೀ ತಿಮ್ಮಣ್ಣ ಭಟ್ಟ ಮತ್ತು ಶ್ರೀಮತಿ ಯಮುನಾ ಅವರ ಕಿರು ಪರಿಚಯ

ತಿಮ್ಮಣ್ಣ ಭಟ್ಟರು ಭಾದ್ರಪದ ಶುದ್ದ ಪಂಚಮಿ 1808ರಲ್ಲಿ ಜನನ, (ಗುರುವಾರ 2ನೆ ಸೆಪ್ಟಂಬರ್ 1886). 8 ವರ್ಷಕ್ಕೆ ಉಪನಯನ, ಗೋಕರ್ಣದ ಗಾಯತ್ರಿ ತಿಮ್ಮಣ್ಣ ಭಟ್ಟರಲ್ಲಿ ಕೃಷ್ಣ ಯುಜುರ್ವೇದ ಅಭ್ಯಾಸ. ಶ್ರೀ ಶಿವಾನಂದ ಸರಸ್ವತಿ ಶಿಗೆಹಳ್ಳಿ ಅವರ ಸನ್ಯಾಸ ದೀಕ್ಷೆ ಸಮಾರಂಭದ ಪೌರೋಹಿತ್ಯ ವಹಿಸಿದರು. ಕಡಬಾಳದ ಯಮುನಾ ಅವರನ್ನು ಮದುವೆಯಾಗಿ ನರಸಿಂಹ, ಯಜ್ಞನಾರಾಯಣ, ಮಹಾದೇವಿ, ದತ್ತಾತ್ರೇಯ, ದಕ್ಷಿಣಾಮೂರ್ತಿ, ರಾಮಚಂದ್ರ, ಗಂಗಾ ಒಟ್ಟು 7 ಮಕ್ಕಳನ್ನು ಪಡೆದರು ಹಾಗೂ ಅಗ್ನಿಹೋತ್ರವನ್ನು ಶುರು ಮಾಡಿದರು. ಸೋಮಯಾಗ ಯಜ್ಞವನ್ನು ಪೂರೈಸಿ ತಿಮ್ಮಣ್ಣ ದಿಕ್ಷಿತ್ ಎನಿಸಿಕೊಂಡರು. ಚಾತುರ್ಮಾಸ ಯಾಗ ಮತ್ತು ನಕ್ಷತ್ರ ಯಾಗಗಳನ್ನೂ ನೆರವೇರಿಸಿದರು. 30ನೆ ವಯಸ್ಸಿನಲ್ಲಿ ದತ್ತಮಂದಿರವನ್ನು ಸ್ತಾಪಿಸಿದರು. ಶ್ರೀಧರ ಸ್ವಾಮೀ ಮತ್ತು ಇತರರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಶ್ರಾವಣ ಶುದ್ದ ಪಂಚಮಿ ಬುಧವಾರ 1873 ಶಕೆ (ಆಗಸ್ಟ್ 8 1951) ಔದಂಬರದಲ್ಲಿ ತಾವೇ ಸನ್ಯಾಸ ದೀಕ್ಷೆ ಸ್ವೀಕರಿಸಿ ಶ್ರೀ ನಾರಾಯಣಾನಂದ ತೀರ್ಥರಾದರು. ಟೆಂಬೆ ಮಹಾರಾಜ, ಅವಧೂತ ಸ್ವಾಮಿ, ಅಕ್ಕಲಕೋಟ ಮಹಾರಾಜ ಮುಂತಾದವರ ಒಡನಾಟ. ಔದಂಬರದಲ್ಲಿ ಶ್ರೀ ಗುರು ಶಿವಶಂಕರಾನಂದ ಆಶ್ರಮ ಸ್ಥಾಪನೆ. ದತ್ತಮಂದಿರ ಸ್ಥಾಪನೆ. ಮಾಘ ಬಹುಳ ಪಾಡ್ಯ 1889 ರಂದು ತಮ್ಮ 82ನೆ ವಯಸ್ಸಿನಲ್ಲಿ ಸಮಾಧಿ ಹೊಂದಿದರು. (ಗುರುವಾರ ಫೆಬ್ರವರಿ 15 1968)

# ಪ್ರಕಾಶಕರ ನುಡಿ

ಮನುಷ್ಯನಿಗೆ ಮಾತ್ರ ಧರ್ಮವನ್ನು ಆಚರಿಸುವ ಸಾಮರ್ಥ್ಯವಿರುವುದು. ಧರ್ಮಾಚರಣೆಯಿಂದಲೇ ಒಬ್ಬ ವ್ಯಕ್ತಿಯು ಸುಂದರವಾದ ಬದುಕನ್ನು ತಾನು ಅನುಭವಿಸುವುದಲ್ಲದೆ, ತನ್ನ ಕುಟುಂಬ, ಸಮಾಜ, ದೇಶ ಹೀಗೆ ಎಲ್ಲವನ್ನು ಬೆಳೆಸಿ ಮೋಕ್ಷ ಸಾಧನೆ ಸಾಧ್ಯವಾಗುವುದು. ಧರ್ಮದ ಸ್ವರೂಪವನ್ನು ವೇದಗಳು, ಶಾಸ್ತ್ರಗಳು, ಉಪನಿಷತ್ತುಗಳು, ಪುರಾಣಗಳು ಮುಂತಾದವುಗಳಿಂದ ತಿಳಿಯಬಹುದಾಗಿದೆ. ಅನೂಚಾನವಾಗಿ ಧರ್ಮಾಚರಣೆ ಮುಂದುವರೆಸಲು ನಮ್ಮ ಪೂರ್ವಜರು ಎಲ್ಲ ಸ್ತರಗಳಲ್ಲಿ ವ್ಯಕ್ತಿ, ಕುಟುಂಬ, ಸಮಾಜ, ದೇಶ, ಹಾಗೂ ಎಲ್ಲ ಕಾಲದಲ್ಲಿ ಅಂದರೆ ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೆ, ಹುಟ್ಟಿದಾಗಿನಿಂದ ಸಾಯುವವರೆಗೆ ಮನುಷ್ಯನಾದವನು ಪಾಲಿಸಬೇಕಾದ ನಿಯಮಗಳನ್ನು ರೂಪಿಸಿದ್ದಾರೆ. ಈ ನಿಯಮಗಳು ಎಲ್ಲರಿಗೆ ಎಲ್ಲ ಕಾಲದಲ್ಲಿ ವ್ಯವಸ್ಥಿತವಾಗಿ ಸಿಗುವಂತಾಗಲು, ಸಮಾಜದ ಪ್ರತಿಯೊಬ್ಬನೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುವಿಧದ ಪುರುಷಾರ್ಥಗಳನ್ನು ಪಡೆಯಬೇಕೆಂಬ ಸಂಕಲ್ಪದಿಂದ, ಮಠಮಾನ್ಯಗಳು, ಸಂಘ ಸಂಸ್ಥೆಗಳು, ದೇವಾಲಯಗಳು, ಸನ್ಯಾಸಿಗಳು, ಪುರೋಹಿತರು, ಅರ್ಚಕರು ಹೀಗೆ ಅನೇಕರನ್ನೊಳಗೊಂಡ ಸುಂದರವಾದ ವ್ಯವಸ್ತೆಯನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುವುದೇ ಈ ಸಂಗ್ರಹದ ಉದ್ದೇಶ.

ಕೃಷ್ಣ ಯಜುರ್ವೇದ-ಬೋಧಾಯನೀಯ ಸ್ಮಾರ್ತ ಹವ್ಯಕ ಸಂಪ್ರದಾಯಸ್ಥ ಮನೆತನವಾದ ಓಣಿಕೈ ಕುಟುಂಬವು ಎಲ್ಲ ಧಾರ್ಮಿಕ - ವೈದಿಕ, ಹಬ್ಬ - ಹರಿದಿನಗಳು, ಹಿರಿಯರ ದಿನಗಳನ್ನು ಪೂರ್ವಜರು ಹಾಕಿಕೊಟ್ಟ ಪದ್ಧತಿಯಂತೆ ಅನೂಚಾನವಾಗಿ ನಡೆಸಿಕೊಂಡು ಬರುತ್ತಾ ಇದ್ದಾರೆ . ಅಪಾರ ಆಸ್ತಿಕ ಶಿಷ್ಯರನ್ನೂ ಕಾಲಮಾನಕ್ಕೆ ಅನುಗುಣವಾಗಿ ಅಲ್ಪಸ್ವಲ್ಪ ತಿದ್ದುಪಡಿಗಳೊಂದಿಗೆ ಮಾರ್ಗದರ್ಶಕ ಸ್ಥಾನದಲ್ಲಿ ನಿಂತು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

ನಮ್ಮ ಕುಟುಂಬದವರು ಹಾಗೂ ಶಿಷ್ಯರು, ಬೆಂಗಳೂರು, ಔದುಂಬರ, ಮುಂತಾದ ಊರುಗಳಲ್ಲಿ ನೆಲೆಸಿದ್ದಾರೆ. ಅಲ್ಲಿಯೂ ಧಾರ್ಮಿಕ, ವೈದಿಕ ಆಚಾರ ವಿಚಾರಗಳನ್ನು ಮುಂದುವರಿಸಿಕೊಂಡು ಹೋಗಲು ಅನುಕೂಲವಾಗುವ ನಿಟ್ಟಿನಲ್ಲಿ, ಹಾಗೂ ಈ ಎಲ್ಲಾ ವಿಚಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುವತ್ತ, ಪ ಪೂ ನಾರಾಯಣಾನಂದ ತೀರ್ಥ ಪ್ರತಿಷ್ಠಾನವು ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯಡಿಯಲ್ಲಿ ಪ್ರಕಟಣಾ ಕಾರ್ಯದಲ್ಲಿ ತೊಡಗಿಸಿಕೊಂಡಿದೆ.

ಆಸಕ್ತ ಜನಸಾಮಾನ್ಯರಿಗೆ ಸರಳ ಕನ್ನಡಭಾಷೆಯಲ್ಲಿ, ಚಿಕ್ಕ ಚಿಕ್ಕ ಪ್ರಕಟಣೆಗಳ ಮೂಲಕ ಉಚಿತವಾಗಿ ಒದಗಿಸುವ ಉದ್ದೇಶ ಪ್ರತಿಷ್ಠಾನದ್ದು. ಪ್ರತಿಷ್ಠಾನದ ಈ ಸೇವಾ ಕಾರ್ಯದಲ್ಲಿ ವಿಷಯ ಸಂಗ್ರಹಣೆ, ಸಂಪಾದನೆ, ಕರಡು ಪರಿಷ್ಕರಣೆ, ವಿನ್ಯಾಸ ಹೀಗೆ ಹಲವು ಕೆಲಸಗಳಲ್ಲಿ ಸಲಹೆ, ಸಹಾಯ, ಸಹಕಾರ ನೀಡಿದ ನನ್ನ ತಮ್ಮ ಶ್ರೀ ಕೇಶವ, ಪತ್ನಿ ಶ್ರೀಮತಿ ಭಾಗೀರಥಿ, ಹಾಗೂ ಪ್ರತ್ಯಕ್ಷ-ಪರೋಕ್ಷವಾಗಿ ಪರಿಶ್ರಮಿಸಿದ ಎಲ್ಲರಿಗೂ ಕೃತಜ್ಞತೆಗಳು. ಆಸಕ್ತ ಆಸ್ತಿಕಲೋಕ ಸಹೃಯದಯರಾಗಿ ಸ್ವೀಕರಿಸಬೇಕೆಂದು ಕೋರಿದೆ.

**ಪ್ರಕಾಶಕರು**

# "Nityopayogi Vedamantragalu"

Smt. Kamala Daxinamurthy Grantha Maalike
Axi – 03

Compiled by
Shridatta Dixit Onikai,
Bengaluru

First Print: 2019

Price: Free

Publisher



**Pa. Pu. Narayanananda Tirtha Pratistana (R)**

No 431, ShriRaksha, 7th Main Road, ISRO Layout,
Bengaluru - 560111, Karnataka, Cell No. 9448242402,
Email: sddixit@outlook.com

# ನಿತ್ಯೋಪಯೋಗಿ ವೇದ ಮಂತ್ರಗಳು

ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆ

ಅಕ್ಷಿ - 03

ಸಂಪಾದನೆ

**ಶ್ರೀದತ್ತ ದಿಕ್ಷಿತ ಓಣಿಕ್ಕೈ, ಬೆಂಗಳೂರು**



ಪ್ರಕಾಶಕರು



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,

ಕರ್ನಾಟಕ, ದೂರವಾಣಿ : +91 94482 42402, sddixit@outlook.com

# ಪರಿವಿಡಿ

# 1 ಪೀಠಿಕೆ

ಮಾನವರಲ್ಲಿರುವ ದೇವರ ಬಗೆಗಿನ ಕಲ್ಪನೆಗಳು ಮತ್ತು ನಂಬುಗೆಗಳು ಸಾವಿರಾರುವರ್ಷ ಪುರಾತನವಾದವು. ಈ ನಂಬುಗೆ ಜನರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿವೆ. ಹಿಂದೂಸಮಾಜದ ಜನರಲ್ಲಿ ಏಕೈಕ ದೇವರ ಕಲ್ಪನೆಯನ್ನು ಉಪನಿಷತ ಕಾಲದಲ್ಲಿ ಕಾಣಬಹುದು. ಸಾಮಾನ್ಯಜನರ ಮಾನಸಿಕ ಇತಿಮಿತಿಗಳನ್ನು ಮತ್ತು ಬಯಕೆಗಳನ್ನು ಗಮನಿಸಿದ ತತ್ವಜ್ಞಾನಿಗಳು, ನೂರಾರು ದೇವತೆಗಳ ವಿವಿಧ ಆರಾಧನಾ ಮಾರ್ಗಗಳನ್ನು ರೂಪಿಸಿಕೊಟ್ಟರು. ಪೂಜೆ-ಪುನಸ್ಕಾರ, ಜಪ-ತಪ, ಹೋಮ-ಹವನ, ದಾನ-ತರ್ಪಣೆ-ಸಂತರ್ಪಣೆ, ನೃತ್ಯ-ಗಾಯನ, ಕೀರ್ತನೆ-ಭಜನೆ, ಪ್ರದಕ್ಷಿಣೆ-ನಮಸ್ಕಾರ, ಕ್ಷೇತ್ರದರ್ಶನ-ತೀರ್ಥಸ್ನಾನ ಹೀಗೆ ಹತ್ತು-ಹಲವು ಮಾರ್ಗಗಳು. ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣು ಎಂಬ ಐದು ದೇವತೆಗಳ **ಪಂಚಾಯತನ** ಪೂಜಾಕ್ರಮವನ್ನು **ಶ್ರೀ ಆದಿ ಶಂಕರಾಚಾರ್ಯರು** ಪ್ರಚುರ ಪಡಿಸಿದರೆಂಬುದು ಪ್ರತೀತಿ. ದಿನನಿತ್ಯದ ಸ್ನಾನಾದಿ ಎಲ್ಲಾ ಕರ್ಮಗಳಿಗೆ ಮಂತ್ರಗಳನ್ನು ಹೇಳಬೇಕು. ಮಂತ್ರಗಳಲ್ಲಿ ನಾಲ್ಕು ವಿಧ, 1) ವೇದಮಂತ್ರ, 2) ಪೌರಾಣಿಕ ಶ್ಲೋಕ ಮಂತ್ರ, 3) ತಾಂತ್ರಿಕ ಮಂತ್ರ ಮತ್ತು 4) ನಾಮ ಮಂತ್ರ. ಪುರುಷಸೂಕ್ತದ ಸಾಲುಗಳಿಂದ ಷೋಡಶೋಪಚಾರ ಪೂಜೆ ವೇದಮಂತ್ರಕ್ಕೆ ಉದಾಹರಣೆ. ವಿಷ್ಣವೇ ನಮಃ, ಶಿವಾಯ ನಮಃ ಇವು ನಾಮ ಮಂತ್ರಗಳಿಗೆ ಉದಾಹರಣೆ. ಲಂ ಪೃಥಿವ್ಯೈ ನಮಃ, ಗಂ ಗಣಪತಯೇ ನಮಃ ಇವು ತಾಂತ್ರಿಕ ಮಂತ್ರಗಳು. ಪಂಚಾಮೃತ ಪೂಜಾ ಸಮಯದಲ್ಲಿ ವೇದ ಮತ್ತು ಶ್ಲೋಕ ಎರಡನ್ನೂ ಹೇಳುವ ರೂಢಿಯೂ ಇದೆ. ಯಾವ ವಿಷಯಕ್ಕೆ ಮಂತ್ರ ಬೇಕಾಗಿರುವುದೋ ಆ ಶಬ್ಧವನ್ನೊಳಗೊಂಡಿರುವ ಪೂರ್ಣವಾಕ್ಯವನ್ನು ಮಂತ್ರವನ್ನಾಗಿ ಉಪಯೋಗಿಸಬಹುದು. ಅದೂ ಸಿಗದಿದ್ದಲ್ಲಿ ವೇದಮಾತಾ ಗಾಯತ್ರಿ ಉಪಯೋಗಿಸಬಹುದು. ಈ ಸಂಕಲನದಲ್ಲಿ ನಿತ್ಯೋಪಯೋಗಿ ವೇದ ಮಂತ್ರಗಳನ್ನು ಸಂಗ್ರಹಿಸಲಾಗಿದೆ. ಈ ಮಂತ್ರಗಳ ಪಠಣದಿಂದ ನಿಮಗೆ ಶಾಂತಿ, ಸಮಾಧಾನ ದೊರೆತು ಇಚ್ಛಾ ಪೂರೈಕೆ ಆದರೆ ನಮ್ಮ ಶ್ರಮ ಸಾರ್ಥಕ.

# 2 ವೇದಗಳ ಪರಿಚಯ

ವೇದ ಮಂತ್ರಗಳು ನಮಗೆ ಧಾರ್ಮಿಕ ದೃಷ್ಟಿಯಿಂದ - ಅಂದರೆ ನಿತ್ಯ (ನಿತ್ಯ ದೇವರಪೂಜೆ, ಸಂಧ್ಯಾವಂದನೆ ಮುಂತಾದವುಗಳು), ನೈಮಿತ್ತಿಕ (ಮದುವೆ, ಉಪನಯನ, ಶ್ರಾದ್ಧ ಮುಂತಾದವುಗಳು) ಮತ್ತು ಕಾಮ್ಯಕ (ವ್ರತ ಪೂಜೆ ಇತ್ಯಾದಿ) ಕರ್ಮಗಳಲ್ಲಿ ಉಪಯೋಗಿಸಿ - ಪರಿಚಯ. ಆದರೆ ವೇದಗಳ ರಚನಾ ವಿಧಾನ, ಅದರ ವಿಷಯಗಳು ಮತ್ತು ತತ್ವದ ಬಗ್ಗೆ ಹೆಚ್ಚಾಗಿ ತಿಳಿದಿರುವುದಿಲ್ಲ. ವೇದದ ತತ್ವದ ವಿಷಯ ಗಹನ ಮತ್ತು ಅದನ್ನು ತಿಳಿಯುವುದು ಕಠಿಣ. ವೇದಗಳ ಕುರಿತಾಗಿ ಸಂಪೂರ್ಣವಾಗಿ ತಿಳಿಯುವುದು ಎಲ್ಲರಿಗೂ ಸಾಧ್ಯವಿಲ್ಲವಾದರೂ, ವೇದದ ಪರಿಚಯ ಎಲ್ಲರಿಗೂ - ಕನಿಷ್ಠಪಕ್ಷ ಆಸ್ತಿಕರಿಗಾದರೂ - ತಿಳಿದಿರಬೇಕು ಎಂಬುದು ನನ್ನ ಅಭಿಪ್ರಾಯ. ಆಗಲೇ ವೇದದ ನಿಜವಾದ ಪ್ರಶಂಸೆ ಮತ್ತು ಅಧ್ಯಯನ ಸಾಧ್ಯವಾಗುತ್ತದೆ.

ನಮ್ಮ ಪ್ರಾಚೀನ ಸಂಸ್ಕೃತ ಸಾಹಿತ್ಯವನ್ನು ಶ್ರುತಿ, ಸ್ಮೃತಿ, ಪುರಾಣಗಳೆಂಬ ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. ಕೇಳಿಸಿಕೊಳ್ಳುವುವು ಶ್ರುತಿಗಳು. ನೆನಪಿನಲ್ಲಿಟ್ಟುಕೊಳ್ಳುವುವು ಸ್ಮೃತಿಗಳು. ದೇವ ದೇವತೆಗಳ ಕಥೆಗಳು ಪುರಾಣಗಳು. ವೇದಗಳು ಶ್ರುತಿ ಭಾಗಕ್ಕೆ ಸೇರುತ್ತವೆ. ಪ್ರಪಂಚದ ಅತ್ಯಂತ ಪುರಾತನ ಗ್ರಂಥಗಳಲ್ಲಿ ವೇದಗಳು ಮುಖ್ಯವಾದುವು. ವೇದಗಳು ಭಾರತೀಯ ಸಂಸ್ಕೃತಿಯ ಅತ್ಯಂತ ಪ್ರಮುಖ ಗ್ರಂಥಗಳು. ವೇದಗಳು ನಾಲ್ಕು - ಋಗ್ವೇದ, ಯಜುರ್ವೇದ, ಸಾಮವೇದ, ಮತ್ತು ಅಥರ್ವವೇದ. ಈ ನಾಲ್ಕು ವೇದಗಳಲ್ಲಿ ಋಗ್ವೇದವೇ ಅತ್ಯಂತ ಹಳೆಯದು, ಋಗ್ವೇದದ ಕಾಲ ಕ್ರಿ.ಪೂ 1500ಕ್ಕಿಂತ ಹಿಂದೆ ಇದ್ದಿರಬಹುದು. ವೇದ ವಾಙ್ಮಯ ಪ್ರಭಾವವು ಬೌದ್ಧ, ಜೈನ ಮತ್ತು ಸಿಖ್ ಧರ್ಮಗಳ ಬೆಳವಣಿಗೆಯಲ್ಲಿ ಪ್ರಮುಖವಾದುದು. ಉಪನಿಷತ್ತುಗಳನ್ನು ವೇದಾಂತ ಎನ್ನುತ್ತಾರೆ.

## 2.1 ವೇದಗಳ ಉಗಮ

ಹಿಂದೂ ಸಂಪ್ರದಾಯದಂತೆ ವೇದಗಳು ಅಪೌರುಷೇಯವಾದವು, ಎಂದೆಂದಿಗೂ ಅಸ್ತಿತ್ವದಲ್ಲಿ ಇದ್ದಿರುವಂಥವು. ಹೀಗೆ ಅವು ಹಿಂದೂ ಶ್ರುತಿ ಪಠ್ಯಗಳ ಗುಂಪಿಗೆ ಸೇರುತ್ತವೆ. ಚಾರಿತ್ರಿಕವಾಗಿ, ವೇದಗಳ ಉಗಮದ ಕಾಲ ಮತ್ತು ಸ್ಥಳ ಭಾರತೀಯ ಹಾಗೂ ಪಾಶ್ಚಾತ್ಯ ಚರಿತ್ರಜ್ಞರಿಂದ ಬಹಳಷ್ಟು ತರ್ಕವಿತರ್ಕತಗಳನ್ನು ಕಂಡಿವೆ. ಫಿಷರ್ ಮೊದಲಾದ ಚರಿತ್ರಜ್ಞರು ವೇದಗಳು 8000 ವರ್ಷಗಳಿಂದಲೂ ಅಸ್ತಿತ್ವದಲ್ಲಿದ್ದಿವೆ ಎಂದು ಅಭಿಪ್ರಾಯಪಟ್ಟಿದ್ದರೂ, ಬಹುಪಾಲು ಚರಿತ್ರಜ್ಞರ ಅಭಿಪ್ರಾಯದಂತೆ ವೇದಗಳ ಸಂಕಲನ ಸುಮಾರು ಕ್ರಿ.ಪೂ 1800 ಕ್ಕೆ ಪ್ರಾರಂಭವಾಗಿ ಕ್ರಿ.ಪೂ 800 ರ ವರೆಗೆ ಎಂದು.

ಸಾಂಪ್ರದಾಯಿಕವಾಗಿ, ಋಗ್ವೇದ ಸಂಹಿತೆಯ ಸಂಕಲನ ವೇದವ್ಯಾಸರ ಸೂಚನೆಯಂತೆ ಪೈಲ ಮಹರ್ಷಿಗಳಿಂದ ನಡೆಯಿತಂತೆ. ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳಲ್ಲಿ ಬಳಸಲ್ಪಡುವ ಮಂತ್ರಗಳ ಸಂಕಲನ ಯಜುರ್ವೇದ ಸಂಹಿತೆಯಾಗಿ ಬೆಳೆಯಿತು. ಸಂಗೀತಕ್ಕೆ ಹೊಂದುವಂತೆ ಬರೆಯಲಾದ ಅನೇಕ ಮಂತ್ರಗಳ ಸಂಕಲನ ಸಾಮವೇದ - ನಾಲ್ಕು ವೇದಗಳಲ್ಲಿ ಕೊನೆಯದು ಅಥರ್ವವೇದ. ಅಥರ್ವವು ಯಂತ್ರ, ತಂತ್ರಗಳ ಬಗ್ಗೆ ವಿವರಗಳನ್ನೊಳಗೊಂಡಿದೆ. ಪ್ರತಿ ವೇದಕ್ಕೂ ಒಂದು ಉಪವೇದವಿದೆ.

## 2.2 ವೇದಗಳ ಭಾಗಗಳು

ಪ್ರತಿ ವೇದವನ್ನೂ ನಾಲ್ಕು ಭಾಗಗಳಾಗಿ ವಿಂಗಡಿಸಬಹುದು:

**ಸಂಹಿತೆ** - ಮಂತ್ರಗಳನ್ನು ಒಳಗೊಂಡ ಭಾಗ. ಸಂಹಿತೆಗಳು ವೇದಗಳ ಮುಖ್ಯಭಾಗಳು. ಸ್ಥೂಲವಾಗಿ ಸಂಹಿತೆಗಳನ್ನೇ ವೇದಗಳೆನ್ನಬಹುದು. ಸಂಹಿತೆಯೆಂದರೆ ಬೇರೆಬೇರೆ ಋಷಿಗಳಿಗೆ ದೃಷ್ಟವಾದ ಮಂತ್ರಗಳನ್ನು ಒಂದು ಕ್ರಮದಲ್ಲಿ ಸೇರಿಸಿ ಒಂದು ಕಡೆ ಒಟ್ಟುಗೂಡಿಸಿರುವುದು ಎಂದರ್ಥ.

**ಬ್ರಾಹ್ಮಣ** - ಧಾರ್ಮಿಕ ಆಚರಣೆಗಳನ್ನು ಕುರಿತ ಭಾಗ. ಬ್ರಾಹ್ಮಣಗಳು ಸಂಹಿತೆಗಳ ಪರಿಶಿಷ್ಟಗಳು (appendix). ಯಜ್ಞ ಕರ್ಮಗಳನ್ನು (ವಿನಿಯೋಗಗಳೂ,

ಕೈಕರಣಗಳೂ) ತಿಳಿಸುವ ಗ್ರಂಥಗಳನ್ನು ಬ್ರಾಹ್ಮಣಗಳು ಎನ್ನಬಹುದು. ಒಂದು ಸಂಹಿತೆಗೆ ಒಂದಕ್ಕಿಂತ ಹೆಚ್ಚಾಗಿ ಬ್ರಾಹ್ಮಣಗಳಿರಬಹುದು.

**ಆರಣ್ಯಕ** - ಧ್ಯಾನಕ್ಕೆ ಸಂಭಂಧಪಟ್ಟದ್ದು. ಋಷಿಗಳು ತಮ್ಮ ಶಿಷ್ಯರಿಗೆ ಇವನ್ನು ಅರಣ್ಯದಲ್ಲಿ ಬೋಧಿಸಿದ್ದರಿಂದ ಇವುಗಳಿಗೆ ಅರಣ್ಯಕಗಳೆಂದು ಹೆಸರು. ಅರಣ್ಯಕಗಳೂ ಸಂಹಿತೆಗಳಿಗೆ ಪರಿಶಿಷ್ಟಗಳು. ಬ್ರಾಹ್ಮಣಗಳಂತೆ ಅರಣ್ಯಕಗಳಲ್ಲಿಯೂ ಯಜ್ಞ ಕ್ರಮಗಳನ್ನು ವಿವರಿಸಲಾಗುತ್ತದೆ. ಆದರೆ ಅರಣ್ಯಕಗಳಲ್ಲಿ ತತ್ವಶಾಸ್ತ್ರಕ್ಕೆ ಸಂಬಂಧಿಸಿದ ಪ್ರಕರಣಗಳು ಹೆಚ್ಚಾಗಿ ಕಂಡುಬರುತ್ತವೆ. ಅರಣ್ಯಕಗಳು ಕೆಲವೊಮ್ಮೆ ಬ್ರಾಹ್ಮಣ ಗ್ರಂಥಗಳ ಕೊನೆಯಲ್ಲಿ ಬರುತ್ತವೆ. ಕೆಲವೊಮ್ಮೆ ಪ್ರತ್ಯೇಕವಾಗಿಯೂ ಇರುತ್ತದೆ. ಬ್ರಾಹ್ಮಣ ಮತ್ತು ಅರಣ್ಯಕಗಳು ಸಂಹಿತೆಯ ಪರಿಶಿಷ್ಟಗಳಾದರು ಹಲವು ಕಡೆ ಇವುಗಳಲ್ಲಿ ಸ್ವತಂತ್ರ ವಿಷಯಗಳನ್ನೂ ಹೇಳಲ್ಪಟ್ಟಿದೆ.

**ಉಪನಿಷತ್** - ತಾತ್ವಿಕ ಮತ್ತು ಅಧ್ಯಾತ್ಮಿಕ ಭಾಗ. ಅರಣ್ಯಕಗಳ ಕೊನೆಯ ಭಾಗವೇ ಉಪನಿಷತ್ತುಗಳೆಂದು ಅನೇಕ ವಿದ್ವಾಂಸರು ತಿಳಿಯುತ್ತಾರೆ. ಉಪನಿಷತ್ತುಗಳು ವೈದಿಕ ತತ್ವಶಾಸ್ತ್ರದ ಮುಖ್ಯ ಪಠ್ಯಗಳು. ಇವುಗಳನ್ನು ವೇದಾಂತ - ವೇದದ ಕೊನೆ - ಎಂದೇ ಪರಿಗಣಿಸುತ್ತಾರೆ. ಬಹು ಗಹನವಾದ ತತ್ವ ವಿಚಾರಗಳನ್ನು ಉಪನಿಷತ್ತುಗಳಲ್ಲಿ ವಿವರಿಸಲಾಗಿದೆ.

## 2.3 ಚತುರ್ವೇದಗಳು

**ಋಗ್ವೇದ** - ನಾಲ್ಕು ವೇದಗಳಲ್ಲಿ ಮೊದಲನೆಯದು. ಚತುರ್ಮುಖ ಬ್ರಹ್ಮನ ಪೂರ್ವಮುಖದಿಂದ ಹೊರಬಂದಿದೆ. ಈ ವೇದದ ಮಂತ್ರಗಳನ್ನು ಯಜ್ಞ, ಯಾಗಾದಿಗಳನ್ನು ಮಾಡುವಾಗ, ದೇವತೆಗಳನ್ನು ಆಹ್ವಾನಿಸಲು ಉಪಯೋಗಿಸುತ್ತಾರೆ. ಯಜ್ಞದಲ್ಲಿ ಋಗ್ವೇದ ಮಂತ್ರಗಳನ್ನು ಪಠಿಸುವವರಿಗೆ "ಹೋತೃ" ವೆಂದು ಕರೆಯುತ್ತಾರೆ. ಋಗ್ವೇದದಲ್ಲಿ ಅನೇಕ ಶಾಖೆಗಳಿವೆ. ಆಯುರ್ವೇದ ಇದರ ಉಪವೇದ.

**ಯಜುರ್ವೇದ** - ಯಜುರ್ವೇದವು ನಾಲ್ಕು ವೇದಗಳಲ್ಲಿ ಎರಡನೆಯದು. ಯಜ್ಞಯಾಗಾದಿಗಳ ವಿವರವಾದ ಕ್ರಮ ವಿವರಣೆಗಳು ಸೇರಿದೆ. ಇದರಲ್ಲಿ 40 ಅಧ್ಯಾಯಗಳಿವೆ. ಯಜುರ್ವೇದದಲ್ಲಿ ಎರಡು ವಿಧಗಳಿದ್ದು ಕೃಷ್ಣ ಯಜುರ್ವೇದ ಹಾಗೂ ಶುಕ್ಲ ಯಜುರ್ವೇದಗಳೆಂದು ಹೆಸರು. ಕೃಷ್ಣಯಜುರ್ವೇದಕ್ಕೆ ತೈತ್ತೀರಿಯ ಸಂಹಿತೆ ಎಂದೂ ಶುಕ್ಲಯಜುರ್ವೇದಕ್ಕೆ ವಾಜಸನೇಯ ಸಂಹಿತೆ ಎಂದೂ ಹೆಸರಿದೆ. ಧನುರ್ವೇದ ಇದರ ಉಪವೇದ. ಯಜ್ಞದಲ್ಲಿ ಯಜುರ್ವೇದ ಮಂತ್ರಗಳನ್ನು ಪಠಿಸುವವರಿಗೆ "ಅಧ್ವರ್ಯು " ವೆಂದು ಕರೆಯುತ್ತಾರೆ. ಧನುರ್ವೇದ ಇದರ ಉಪವೇದ.

**ಸಾಮವೇದ** - ಸಾಮವೇದ ಮಂತ್ರಗಳನ್ನು ಸ್ವರ ಸಂಯೋಜನೆ ಮಾಡಿ ಹಾಡುವುದಕ್ಕೆ ಸಾಮ ಎಂದು ಹೇಳುತ್ತಾರೆ. ಸಾಮವೇದವು ಗಾನರೂಪವಾಗಿ ಹಾಡುವ ಮಂತ್ರಗಳಿಂದ ಕೂಡಿದ ವೇದವಾಗಿದೆ. ದೇವತೆಗಳನ್ನು ಸ್ತುತಿಸುವ ಮಂತ್ರಗಳು ಇದರಲ್ಲಿ ಸೇರಿದ್ದು ಎಲ್ಲವನ್ನೂ ಸ್ವರಲಯಸಹಿತ ಛಂದೋಬದ್ಧವಾಗಿ ಹೇಳಬೇಕಾಗಿದೆ. ಈ ವೇದದಲ್ಲಿ ಋಗ್ವೇದದ ಮಂತ್ರಗಳೇ ಹೆಚ್ಚು ಇದ್ದು ಹೆಚ್ಚು ಕಡಿಮೆ 78 ಮಂತ್ರಗಳು ಮಾತ್ರ ಹೊಸತಾಗಿವೆ. ಇದರಲ್ಲಿ 15 ಭಾಗಗಳಿದ್ದು 32 ಅಧ್ಯಾಯಗಳಿವೆ. ಗಾಂಧರ್ವವೇದ ಇದರ ಉಪವೇದ. ಯಜ್ಞದಲ್ಲಿ ಸಾಮವೇದ ಮಂತ್ರಗಳನ್ನು ಪಠಿಸುವವರಿಗೆ "ಉದ್ಗಾತೃ " ವೆಂದು ಕರೆಯುತ್ತಾರೆ. ಮತ್ತು ನಾಲ್ಕೂ ವೇದಗಳನ್ನು ತಿಳಿದು ಪಠಿಸಬಲ್ಲವನನ್ನು ಬ್ರಹ್ಮನೆಂದೂ ಕರೆಯುತ್ತಾರೆ. ಗಾಂಧರ್ವವೇದ ಇದರ ಉಪವೇದ.

**ಅಥರ್ವವೇದ** – ಅಥರ್ವವೇದವು ಹಿಂದೂ ಧರ್ಮದ ನಾಲ್ಕು ವೇದಗಳಲ್ಲಿ ಕೊನೆಯದು. ಅಥರ್ವಣ ಅಂಗೀರಸ ಋಷಿಗಳು ರಚಿಸಿದ ಮಂತ್ರಗಳಿಂದ ಕೂಡಿದ ವೇದವಾದುದರಿಂದ ಈ ಹೆಸರು. ಇದರಲ್ಲಿ 20 ಕಾಂಡಗಳೂ, 760 ಸೂಕ್ತಗಳೂ, 6000 ಮಂತ್ರಗಳೂ ಇವೆ. ಗದ್ಯ ಹಾಗೂ ಪದ್ಯ ಎರಡೂ ಶೈಲಿಯಲ್ಲಿ ರಚಿತವಾಗಿದೆ. ಈ ವೇದದಲ್ಲಿ ವಿವಾಹ ಪದ್ಧತಿ, ಶವಸಂಸ್ಕಾರ, ಗೃಹನಿರ್ಮಾಣ ಮುಂತಾದ ಜನರ ದಿನನಿತ್ಯದ ಜೀವನಕ್ಕೆ ಸಂಬಂಧಿಸಿದ ವಿಚಾರಗಳು ಕೂಡಾ ಸೇರಿಕೊಂಡಿದೆ. ಮಾಟ

ಮಂತ್ರ, ಯಕ್ಷಿಣಿವಿದ್ಯೆ, ಇಂದ್ರಜಾಲ ಮುಂತಾದವುಗಳೂ ವಿಸ್ತಾರವಾಗಿ ಪ್ರಸ್ತಾಪಿಸಲ್ಪಟ್ಟಿದೆ. ಧನುರ್ವಿದ್ಯೆ, ರೋಗನಿವಾರಣೋಪಾಯ, ಔಷಧಿಗಳ ವಿವರ ಕೂಡಾ ಇದರಲ್ಲಿದೆ. ಯಜ್ಞಯಾಗಾದಿಗಳನ್ನು ನಿರ್ವಹಿಸುವ ಕ್ರಮದ ವಿವರಗಳೂ ಸೇರಿದೆ. ಶಸ್ತ್ರಶಾಸ್ತ್ರ ಇದರ ಉಪವೇದ.

## 2.4 ವೇದ ಶಾಖೆಗಳು

ಪ್ರತಿಯೊಂದು ವೇದಕ್ಕೂ ಅನೇಕ ಶಾಖೆಗಳಿವೆ. ಅವೆಲ್ಲ ಇಂದು ಪ್ರಚಾರದಲ್ಲಿಲ್ಲ. ಒಂದು ವೇದಕ್ಕೆ ಒಂದೋ ಎರೆಡೋ ಶಾಖೆಗಳು ಚಾಲ್ತಿಯಲ್ಲಿವೆ. ಕೆಲವು ಶಾಖೆಗಳು ಉತ್ತರ ಭಾರತದಲ್ಲಿದ್ದರೆ ಕೆಲವು ದಕ್ಷಿಣ ಭಾರತದಲ್ಲಿವೆ. ವೇದಗಳ ಮುಖ್ಯ ಶಾಖೆಗಳ ವಿವರ ಇಂತಿದೆ:

**ಋಗ್ವೇದ ಶಾಖೆಗಳು** - ಋಗ್ವೇದಕ್ಕೆ 21 ಶಾಖೆಗಳಿವೆಯೆಂದು ಹೇಳುತ್ತಾರೆ. ಇವುಗಳಲ್ಲಿ ಶಾಕಲ, ಬಾಷ್ಕಲ, ಮತ್ತು ಆಶ್ವಲಾಯನ ಶಾಖೆಗಳ ಪ್ರತಿಗಳು ದೊರೆತಿವೆ. ಆಶ್ವಲಾಯನ ಶಾಖೆಯ ಸೂತ್ರಗ್ರಂಥಗಳು (ಸ್ಮೃತಿಗಳು - ಇದರ ಬಗ್ಗೆ ಮುಂದೆ ತಿಳಿಸಲಾಗುತ್ತದೆ) ಪ್ರಸಿದ್ಧಿಯಾಗಿವೆ (ಅನೇಕ ಋಗ್ವೇದಿಗಳು - ಅದರಲ್ಲೂ ದಕ್ಷಿಣ ಭಾರತದವರು - ಆಶ್ವಲಾಯನ ಶಾಖೆಯವರು. ಅವರು ತಮ್ಮ ಪ್ರವರಗಳಲ್ಲಿ 'ಆಶ್ವಲಾಯನ ಸೂತ್ರಃ' ಎಂದೇ ಹೇಳಿಕೊಳ್ಳುತ್ತಾರೆ).

**ಶುಕ್ಲಯಜುರ್ವೇದ ಶಾಖೆಗಳು** - ಶುಕ್ಲ ಯಜುರ್ವೇದಕ್ಕೆ 15 ಶಾಖೆಗಳಿವೆ. ಅವುಗಳಲ್ಲಿ ಮಾಧ್ಯಂದಿನ ಮತ್ತು ಕಾಣ್ವವೆಂಬ ಎರಡು ಶಾಖೆಗಳು ಮಾತ್ರ ಪ್ರಸಿದ್ಧಿಯಾದವು. ಮಾಧ್ಯಂದಿನ ಶಾಖೆ ಉತ್ತರ ಭಾರದಲ್ಲಿಯೂ, ಕಾಣ್ವ ಶಾಖೆ ದಕ್ಷಿಣ ಭಾರತದಲ್ಲಿಯೂ ಚಾಲ್ತಿಯಲ್ಲಿದೆ.

**ಕೃಷ್ಣಯಜುರ್ವೇದ ಶಾಖೆಗಳು** - ಕೃಷ್ಣ ಯಜುರ್ವೇದಕ್ಕೆ ದೊರೆತಿರುವ ಶಾಖೆಗಳು 16. ಇವುಗಳಲ್ಲಿ ತೈತ್ತಿರೀಯ, ಬೋಧಾಯನ, ಆಪಸ್ತಂಬ, ಕಾಠಕ ಎಂಬುವು ಪ್ರಸಿದ್ಧ. ದಕ್ಷಿಣ ಭಾರತದಲ್ಲಿ ತೈತ್ತಿರೀಯ ಶಾಖೆ ಚಾಲ್ತಿಯಲ್ಲಿದೆ. ತಿತ್ತಿರಿ ಮಹರ್ಷಿಗಳು ವ್ಯಾಸರ ನೇರ ಶಿಷ್ಯರಾದ ವೈಶಂಪಾಯನರ ಸಮೀಪ ಬಂಧುಗಳು

ಎಂದು ಕೆಲವು ಕಡೆ ಹೇಳಿದೆ. ವೇದ ಭಾಷ್ಯ ಬರೆದ ಸಾಯಣರು ಬೋಧಾಯನ ಶಾಖೆಯವರು. ಆಪಸ್ಥಂಬ ಶಾಖೆಯ ಆಪಸ್ಥಂಬ ಸೂತ್ರ ಪ್ರಸಿದ್ಧವಾಗಿದೆ.

**ಸಾಮವೇದದ ಶಾಖೆಗಳು -** ಸಾಮವೇದಕ್ಕೆ 1000 ಶಾಖೆಗಳಿವೆ. ಆದರೆ ಅವುಗಳಲ್ಲಿ ಕೌತುಮವೆಂಬ ಒಂದು ಶಾಖೆ ಮಾತ್ರ ಪ್ರಸಿದ್ಧ.

**ಅಥರ್ವವೇದ ಶಾಖೆಗಳು -** ಅಥರ್ವ ವೇದಕ್ಕೆ 9 ಶಾಖೆಗಳಿವೆ. ಅವುಗಳಲ್ಲಿ ಶೌನಕ ಮತ್ತು ಪಿಪ್ಪಲಾದ ಶಾಖೆಗಳು ಪ್ರಸಿದ್ಧ.

## 2.5 ವೇದಾಂಗಗಳು

ವೇದಾಂಗಗಳು ವೇದಗಳ ಭಾಗಗಳಲ್ಲ. ಇವು ವೇದಗಳನ್ನು ಕಲಿಯಲು, ಅರ್ಥ ಮಾಡಿಕೊಳ್ಳಲು ಉಪಯುಕ್ತವಾದಗ್ರಂಥಗಳು. ವೇದಗಳು ಸಾವಿರಾರು ವರ್ಷಗಳಿಂದ ಶಾಖಾ ಭೇದಗಳನ್ನು ಹೊರತುಪಡಿಸಿ ಸ್ವರ ಮಾತ್ರೆಗಳಲ್ಲಿ ಶಿಥಿಲವಾಗದೆ ಇರುವುದಕ್ಕೆ ಕಾರಣ ವೇದಾಂಗಗಳು. ಆರು ವೇದಾಂಗಗಳಿವೆ: ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ. ವೇದಾಂಗಗಳು ಸ್ಮೃತಿಗಳು. ಅಂದರೆ ನೆನಪಿನಲ್ಲಿಟ್ಟುಕೊಳ್ಳಬೇಕಾದವು.

**ಶಿಕ್ಷಾ** - ಶಿಕ್ಷಾ ಎಂದರೆ ವೇದಗಳನ್ನು ಸ್ವರಸಹಿತವಾಗಿ ಉಚ್ಚಾರಣಾ ದೋಷಗಳಿಲ್ಲದೆ ಪಠಿಸುವುದನ್ನು ಕಲಿಸುವ ಶಾಸ್ತ್ರ. ವೇದದ ಪ್ರತಿಶಾಖೆಗೂ ಅದರದೇ ಆದ ಪ್ರತ್ಯೇಕ ಶಿಕ್ಷಾ ಗ್ರಂಥಗಳಿವೆ. ಅಕ್ಷರ, ಸ್ವರ, ವ್ಯಂಜನಗಳ, ಅಕ್ಷರ ಜೋಡಣೆ, ಉಚ್ಛಾರಣಾ ವಿಧಾನ, ವ್ಯಂಜನ ಸಂಧಿಗಳು, ಅಕ್ಷರ ಉತ್ಪತ್ತಿ ಮತ್ತು ಛಂದಸ್ಸುಗಳ ಬಗ್ಗೆ ವಿವರಣೆ ಕೊಡಲಾಗಿದೆ. ಶಿಕ್ಷಾ ಶಾಸ್ತ್ರದಲ್ಲಿ ಆರು ಭಾಗಗಳಿವೆ: ವರ್ಣ, ಸ್ವರ, ಮಾತ್ರ, ಬಲ, ಸಾಮ ಮತ್ತು ಸಂತಾನ.

**ವ್ಯಾಕರಣ -** ವೇದದ ಅರ್ಥವನ್ನು ತಿಳಿಯಲು, ವೇದ ಮಂತ್ರಗಳು ಸ್ವರ, ಮಾತ್ರಾದಿಗಳ ವ್ಯತ್ಯಾಸವಾಗದಂತೆ ಕಾಪಾಡಲು, ಮಂತ್ರಗಳ ಲಿಂಗ, ವಚನಾದಿಗಳನ್ನು ತಿಳಿಯಲು, ಸಂಧಿ ಸಮಾಸಗಳನ್ನು ತಿಳಿಯಲು ವ್ಯಾಕರಣ ಶಾಸ್ತ್ರವೇ

ಮುಖ್ಯವಾದುದು. ನಮಗೆ ಈಗ ಸಿಗುವ ಪಾಣಿನಿಯ ಎಂಟು ಅಧ್ಯಾಯಗಳ ಅಷ್ಟಾಧ್ಯಾಯಿ ಎಂಬ ವ್ಯಾಕರಣ ಗ್ರಂಥವೇ ಪುರಾತನವಾದುದು.

**ಛಂದಸ್ಸು** - ಉಚ್ಚ ಸಾಹಿತ್ಯದ ಬಹುತೇಕ ಗ್ರಂಥಗಳು ಛಂದೋಬದ್ದವಾಗಿವೆ. ಛಂದೋಬದ್ಧವಾದ ಪದ್ಯಗಳನ್ನು ನೆನಪಿನಲ್ಲಿಟ್ಟುಕೊಳ್ಳಲು ಅನುಕೂಲವಾದ್ದರಿಂದ ಬರವಣಿಗೆಯಿಲ್ಲದ ಆ ಕಾಲದಲ್ಲಿ ವೇದಗಳನ್ನು ಛಂದೋಬದ್ದವಾಗಿ ರಚಿಸಿರುವುದು ಸ್ವಾಭಾವಿಕವಾಗಿದೆ. 'ಛಂದಃ ಪಾದೌ ತು ವೇದಸ್ಯ' ಎಂಬಂತೆ ಮನುಷ್ಯನಿಗೆ ಕಾಲುಗಳು ಎಷ್ಟು ಮುಖ್ಯವೋ ವೇದಗಳಿದೆ ಛಂದಸ್ಸು ಅಷ್ಟು ಮುಖ್ಯ. ಛಂದಸ್ಸುಗಳು ವೇದ ಮಂತ್ರಗಳ (ಪದ್ಯರೂಪ ಮಂತ್ರಗಳ) ವೃತ್ತಗಳ ಕುರಿತು ಚರ್ಚಿಸುತ್ತದೆ. ವೇದಗಳಲ್ಲಿ ಋಗ್, ಸಾಮ ಮತ್ತು ಹಲವು ಅಥರ್ವ ವೇದದ ಭಾಗಗಳು ಪದ್ಯರೂಪದಲ್ಲಿವೆ. ಯಜುರ್ವೇದವು ಗದ್ಯ ರೂಪದಲ್ಲಿದೆ. ಪಿಂಗಲರಿಂದ ರಚಿತವಾದ ಛಂದಸ್ಸಿನ ಕುರಿತಾದ ಗ್ರಂಥವೇ ಈಗ ಬಳಕೆಯಲ್ಲಿದೆ. ಇದರಲ್ಲಿ ವೇದ ವೃತ್ತಗಳಲ್ಲದೆ ಆಧುನಿಕ ಸಂಸ್ಕೃತದ ಛಂದಸ್ಸುಗಳೂ ಚರ್ಚಿಸಲ್ಪಟ್ಟಿದೆ.

ಛಂದಸ್ಸುಗಳು ಋಕ್ಕುಗಳಲ್ಲಿನ ಅಕ್ಷರ ಸಂಖ್ಯೆಯ ಅನುಗುಣವಾಗಿ ವಿಂಗಡಿಸಲ್ಪಟ್ಟಿದೆ. ವೇದ ಛಂದಸ್ಸುಗಳಲ್ಲಿ ಮುಖ್ಯವಾದವು, ಗಾಯತ್ರಿ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಮತ್ತು ಜಗತೀ ಮುಖ್ಯವಾದವು.

**ನಿರುಕ್ತ** - ವೇದಾರ್ಥಕ್ಕೆ ಸಹಾಯವಾದ ಶಾಸ್ತ್ರ ನಿರುಕ್ತ. ನಿರುಕ್ತಶಾಸ್ತ್ರವು ಯಾಸ್ಕರಿಂದ ರಚಿಸಲ್ಪಟ್ಟಿದೆ. ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯದು ನಿಘಂಟು. ನಿಘಂಟುವಿನಲ್ಲಿ ಕ್ಲಿಷ್ಟ ಪದಗಳ ಅರ್ಥಗಳ ಪಟ್ಟಿಯಿದೆ. ಎರಡನೆಯದು ನಿರುಕ್ತ. ಇದರಲ್ಲಿ ಪದಗಳ ಉತ್ಪತ್ತಿ, ವ್ಯಾಖ್ಯಾನಗಳಿವೆ. ಆಂಗ್ಲದಲ್ಲಿ ನಿರುಕ್ತವನ್ನು etymology ಎಂದು ಕರೆಯುತ್ತಾರೆ.

**ಜ್ಯೋತಿಷ** - ಜ್ಯೋತಿಷ ಶಾಸ್ತ್ರವು ವೇದದಲ್ಲಿ ಮಾಡುವ ಯಜ್ಞ-ಯಾಗಾದಿ ಕ್ರಮಗಳನ್ನು ಮಾಡಬೇಕಾದ ಕಾಲ ಮಹೂರ್ತಗಳನ್ನು ಕುರಿತು ಚರ್ಚಿಸುತ್ತದೆ.

ಗ್ರಹಗತಿಗಳಿಂದ ಮನುಷ್ಯನ ಶುಭಾಶುಭ ಫಲಗಳನ್ನು ತಿಳಿಸುವ ಜ್ಯೋತಿಷಕ್ಕೂ ಇದಕ್ಕೂ ಯಾವುದೇ ಸಂಬಂಧವಿಲ್ಲ.

**ಕಲ್ಪ -** ಕಲ್ಪ ಸೂತ್ರಗಳಲ್ಲಿ ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ, ಶುಲ್ವಸೂತ್ರಗಳೆಂದು ನಾಲ್ಕು ವಿಧ. ಇವುಗಳಲ್ಲಿ ಶ್ರೌತಸೂತ್ರ ಮತ್ತು ಶುಲ್ವಸೂತ್ರಗಳು ವೇದಕ್ಕೆ ನೇರವಾಗಿ ಸಂಬಂಧಪಟ್ಟವು. ಗೃಹ್ಯ ಮತ್ತು ಧರ್ಮಸೂತ್ರಗಳು ವೇದವನ್ನು ಆಶ್ರಯಿಸಿ ರಚಿಸಿದ ಪ್ರತ್ಯೇಕ ಗ್ರಂಥಗಳು. ಆದ್ದರಿಂದ ಶ್ರೌತ ಮತ್ತು ಶುಲ್ವಸೂತ್ರಗಳನ್ನು ಮಾತ್ರ ವೇದಾಂಗಗಳು.

ಕಲ್ಪ ಸೂತ್ರಗಳು ಬೇರೆ ಬೇರೆ ವೇದಗಳಿಗೆ ಬೇರೆ ಬೇರೆಯಾಗಿವೆ. ಕಲ್ಪಸೂತ್ರಗಳಿಗೆ ಅವನ್ನು ರಚಿಸಿದ ಋಷಿಗಳ ಹೆಸರಿಡಲಾಗಿದೆ. ಕಲ್ಪ ಸೂತ್ರಗಳಲ್ಲಿ ಯಜ್ಞ ಯಾಗಾದಿಗಳ ಕ್ರಮವೂ, ಅವುಗಳಲ್ಲಿ ಉಪಯೋಗಿಸಬೇಕಾದ ವೇದ ಮಂತ್ರಗಳೂ, ಯಜ್ಞದಲ್ಲಿ ಉಪಯುಕ್ತವಾದ ಅಗ್ನಿಕುಂಡ, ವೇದಿಕೆ, ಸಾಮಗ್ರಿ, ಅವುಗಳ ಪ್ರಮಾಣ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಗಿದೆ.

ಋಗ್ವೇದಕ್ಕೆ ಅಶ್ವಲಾಯನ ಮತ್ತು ಸಾಂಖ್ಯಾಯನ, ಕೃಷ್ಣ ಯಜುರ್ವೇದಕ್ಕೆ ಬೋಧಾಯನ ಮತ್ತು ಆಪಸ್ಥಂಬ, ಶುಕ್ಲ ಯಜುರ್ವೇದಕ್ಕೆ ಕಾತ್ಯಾಯನ, ಸಾಮವೇದಕ್ಕೆ ಲಾಟ್ಯಾಯನ ಶ್ರೌತಸೂತ್ರಗಳಿವೆ. ಇಂದಿಗೂ ಗೋತ್ರ ಪ್ರವರವನ್ನುಚ್ಚರಿಸುವಾಗ ಆಯಾ ಗೋತ್ರದವರು ಆಯಾ ವೇದಗಳಿಗೆ ಸಂಬಂಧಿಸಿದ ಸೂತ್ರಗಳನ್ನು ಉಚ್ಚರಿಸುತ್ತಾರೆ.
ಈ ಆರು ವೇದಾಂಗಗಳಲ್ಲದೆ ವೇದ ಸೂಕ್ತಗಳನ್ನು, ಅವುಗಳಲ್ಲಿರುವ ಮಂತ್ರ ಸಂಖ್ಯೆಗಳನ್ನು, ಸೂಕ್ತಗಳ ಸೇವಾತೆಗಳನ್ನೂ ತಿಳಿಸುವ ಅನುಕ್ರಮಣಿಕೆಗಳೆಂಬ ಗ್ರಂಥಗಳೂ ಇವೆ.

## 2.6 ವೇದಪಾಠಕ್ರಮ

ಸಾವಿರಾರು ವರ್ಷಗಳ ಕಾಲ ವೇದಗಳು ಅಚ್ಚಳಿಯದಂತೆ ಉಳಿದಿರಬೇಕಾದರೆ ಅದನ್ನು ಕಲಿಯಲು ಒಂದು ಕ್ರಮವಿದ್ದೇ ಇರಬೇಕು. ನಮ್ಮ ಋಷಿಗಳು ವೇದಪಾಠಕ್ಕೆ

ಕ್ರಮವನ್ನು ಗೊತ್ತುಪಡಿಸಿದ್ದಾರೆ. ವೇದಗಳನ್ನು ಗುರುವಿನ ಅಥವಾ ತಂದೆಯ ಅಭಿಮುಖವಾಗಿ ಕುಳಿತು ಕಲಿಯಬೇಕು. ಈ ಕಲಿಕೆಗೆ ಒಂದು ಕ್ರಮವಿದೆ. ಈ ಕ್ರಮವು ಇಂದಿಗೂ ರೂಢಿಯಲ್ಲಿದೆ.

ಮೊದಲು ವೇದವನ್ನು ಸಂಹಿತಾ ಪಾಠದಲ್ಲಿ - ಅಂದರೆ ಪೂರ್ಣ ವಾಕ್ಯರೂಪದಲ್ಲಿ - ಅಭ್ಯಾಸ ಮಾಡಬೇಕು. ನಂತರ ವಾಕ್ಯದ ಒಂದೊಂದೇ ಪದಗಳನ್ನು ಬಿಡಿಸಿ ಅಧ್ಯಯನ ಮಾಡಬೇಕು. ಇದನ್ನು ಪದಪಾಠವೆನ್ನುತ್ತಾರೆ. ಇವೆರಡಲ್ಲದೆ ಇನ್ನು ೯ ವಿಧಾನಗಳಿವೆ. ಈ ಪಾಠಗಳನ್ನು ಎರೆಡು ವಿಧವಾಗಿ ವಿಂಗಡಿಸಿದ್ದಾರೆ: ಪ್ರಕೃತಿ ಮತ್ತು ವಿಕೃತಿಗಳು. ಪ್ರಕೃತಿ ವಿಧಾನದಲ್ಲಿ ಪದಗಳನ್ನು ಸಂಹಿತೆಯ ಕ್ರಮವಾಗಿಯೇ ಪಠಿಸಲಾಗುತ್ತದೆ. ವಿಕೃತಿಗಳಲ್ಲಿ ಪದಗಳನ್ನು ಹಿಂದು ಮುಂದಾಗಿಯೂ ಪಠಿಸುತ್ತಾರೆ. ಎಲ್ಲ ಪಾಠಗಲ್ಲಿಯೂ ಸ್ವರ, ವ್ಯಾಕರಣ ನಿಯಮಗಳು ಪಾಲಿಸಲ್ಪಡುತ್ತವೆ. ಸಂಹಿತಾ ಪಾಠ, ಪದಪಾಠ, ಕ್ರಮಪಾಠ ಎಂಬುವು ಪ್ರಕೃತಿಗಳು. ವಿಕೃತಿಗಳು ಎಂಟಿವೆ:

ಜಟಾ ಮಾಲಾ ಶಿಖಾ ರೇಖಾ ಧ್ವಜೋ ದಂಡೋ ರಥೋ ಘನಃ । ಅಷ್ಟೌ ವಿಕೃತಯಃ ಪ್ರೋಕ್ತಾಃ ಕ್ರಮಪೂರ್ವಾ ಮಹರ್ಷಿಭಿಃ ॥

ಜಟಾ, ಮಾಲಾ, ಶಿಖಾ, ರೇಖಾ, ಧ್ವಜ, ದಂಡ, ರಥ ಮತ್ತು ಘನ ಎಂಬುವು ಎಂಟು ವಿಕೃತಿಗಳು. ಇವುಗಳಲ್ಲಿ ಜಟಾಪಾಠ ಮತ್ತು ಘನಪಾಠಗಳು ಮಾತ್ರ ಇಂದು ರೂಢಿಯಲ್ಲಿವೆ. ಪಾಠ ಕ್ರಮದಲ್ಲಿ ವಿವಿಧ ಶಾಖೆಗಳಲ್ಲಿ ಸ್ವಲ್ಪ ವ್ಯತ್ಯಾಸಗಳಿವೆ.

## 2.7 ಸ್ಮೃತಿ ಗ್ರಂಥಗಳು

ಹಿಂದೆಯೇ ಹೇಳಿದಂತೆ ಸ್ಮೃತಿಗಳು ನೆನಪಿಟ್ಟುಕೊಳ್ಳವೇಕಾದ ಗ್ರಂಥಗಳು. ವೇದಾಂಗಗಳು ಸ್ಮೃತಿಗಳು. ವೇದಾಂಗಗಳಲ್ಲದೆ ಕಾವ್ಯ, ಇತಿಹಾಸ, ಪುರಾಣ, ರಾಮಾಯಣ, ಮಹಾಭಾರತ ಮುಂತಾದವುಗಳೆಲ್ಲ ಸ್ಮೃತಿಗಳು. ಇವುಗಳಲ್ಲಿ ಕೆಲವನ್ನು ಪುರಾಣಗಳಾಗಿ ವಿಂಗಡಿಸಲಾಗುತ್ತದೆ. ಸ್ಮೃತಿಗಳೆಲ್ಲ ಶ್ರುತಿಗಳ ನಂತರ ರಚಿಸಲ್ಪಟ್ಟವುಗಳು. ಇವಕ್ಕೆಲ್ಲ ಶ್ರುತಿಗಳೇ ಆಧಾರ.

ಸ್ಮೃತಿಗಳಲ್ಲಿ ಮುಖ್ಯವಾದವು ಕಲ್ಪಸೂತ್ರಗ್ರಂಥಗಳು. ಕಲ್ಪಸೂತ್ರಗಳಲ್ಲಿ ಶ್ರೌತ ಮತ್ತು ಶುಲ್ಬಸೂತ್ರಗಳು ವೇದಗಳನ್ನು ತಿಳಿಯಲು ಅನುಕೂಲವಾದದ್ದರಿಂದ ಅವುಗಳನ್ನು ವೇದಾಂಗಗಳಾಗಿ ಪರಿಗಣಿಸಲಾಗಿದೆ. ಧರ್ಮಸೂತ್ರಗಳು ಮತ್ತು ಗೃಹ್ಯಸೂತ್ರಗಳು ವೇದಗಳನ್ನು ಆಧರಿಸಿ ರಚಿಸಲ್ಪಟ್ಟ ಪ್ರತ್ಯೇಕ ಗ್ರಂಥಗಳು.

ಸೂತ್ರಗ್ರಂಥಗಳು ವೇದಕಾಲಕ್ಕಿಂತ ತುಂಬಾ ಈಚಿನವು. ಇವುಗಳ ಕಾಲವನ್ನು ಸುಮಾರು ಕ್ರಿ.ಪೂ. 500ರಿಂದ ಕ್ರಿ.ಶ. 200ರ ವರೆಗೆ ಎಂದು ಅಂದಾಜಿಸಬಹುದು. ಇವು ವೇದಕಾಲೋತ್ತರ ಸಾಮಾಜಿಕ ಜೀವನವನ್ನು ತಿಳಿಯಲು ಸಹಾಯವಾಗುತ್ತವೆ.

ಧರ್ಮಸೂತ್ರಗಳಿಗೆ ಸಾಮಯಾಚಾರಿಕ ಸೂತ್ರಗಳೆಂದೂ ಹೆಸರು. ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಮತ್ತು ಶೂದ್ರ ಪಂಗಡಗಳೂ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಆಶ್ರಮದವರೂ ಸಮಾಜಗಳಲ್ಲಿ ಹೇಗೆ ನಡೆಯಬೇಕೆಂದು ತಿಳಿಸಿಕೊಡುತ್ತವೆ. ಧರ್ಮಸೂತ್ರಗಳು ವಿವಿಧ ವೇದಗಳಿಗೆ ಬೇರೆ ಬೇರೆಯಾಗಿದ್ದವೆಂದು ತೋರುತ್ತದೆ. ಆದರೆ ನಮಗೆ ಇಂದು ಸಿಕ್ಕಿರುವುದು ಆಪಸ್ಥಂಬ, ಹಿರಣ್ಯಕೇಶೀಯ ಮತ್ತು ಬೋಧಾಯನ ಧರ್ಮಸೂತ್ರಗಳು ಮಾತ್ರ. ಈ ಧರ್ಮಸೂತ್ರಗಳನ್ನು ಅನುಸರಿಸಿ ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ ಮುಂತಾದವುಗಳು ರಚಿತವಾಗಿವೆ.

ಗೃಹ್ಯಸೂತ್ರಗಳು ಸಂಸಾರಿಯೂ ನಿತ್ಯ ಆಚರಿಸಬೇಕಾದ ಕರ್ಮಗಳ ಬಗ್ಗೆ ತಿಳಿಸುತ್ತವೆ. ಗೃಹ್ಯಸೂತ್ರಗಳೂ ಪ್ರತಿ ವೇದಕ್ಕೆ ಬೇರೆ-ಬೇರೆಯಾಗಿವೆ. ಗೃಹ್ಯಸೂತ್ರಗಳ ಸಾಮಾನ್ಯ ವಿಷಯಗಳು ಪಾಕಯಜ್ಞ, ಬಲಿಹರಣ, ನಾಮಕರಣ, ಚೌಲ, ಉಪನಯನ, ವಿವಾಹ ಮುಂತಾದವುಗಳು. ಋಗ್ವೇದದ ಗೃಹ್ಯಸೂತ್ರಗಳು ಅಶ್ವೀಲಾಯನ ಮತ್ತು ಸಾಂಖ್ಯಾಯನ ಗೃಹ್ಯಸೂತ್ರಗಳು. ಕೃಷ್ಣಯಜುರ್ವೇದದ ಆಪಸ್ಥಂಬ, ಬೋಧಾಯನ, ಶುಕ್ಲ ಯಜುರ್ವೇದದ ಪಾರಸ್ಕರ, ಸಾಮವೇದದ ಗೋಭಿಲ, ಅಥರ್ವವೇದದ ಕೌಶಿಕ ಗೃಹ್ಯಸೂತ್ರಗಳು ಪ್ರಸಿದ್ಧಿಯಾಗಿವೆ.

ರಾಮಾಯಣ ಮಹಾಭಾರತಗಳು ಭಾರತ ಸಾಹಿತ್ಯದ ಅತ್ಯುಷ್ಕೃತ ಗ್ರಂಥಗಳು. ಇವುಗಳನ್ನು ಬರೆದವರು ಕ್ರಮವಾಗಿ ವಾಲ್ಮೀಕಿ ಮತ್ತು ವ್ಯಾಸ ಮಹರ್ಷಿಗಳು. ಈ

ಗ್ರಂಥಗಳು ವಿಷ್ಣುವಿನ ಅವತಾರಗಳೆಂದು ಪರಿಗಣಿಸಲಾದ ರಾಮ ಮತ್ತು ಕೃಷ್ಣರ ಕಥೆಗಳು. ವೇದ ಮತ್ತು ಕಲ್ಪಸೂತ್ರಗಳ ಸಂದೇಶವು ಇಲ್ಲಿ ಕಥಾರೂಪದಲ್ಲಿ ವಿವರಿಸಲಾಗಿದೆ. ಇವನ್ನು ಪಂಚಮ ವೇದಗಳೆಂದೂ ಕರೆಯಬಹುದು. ಭಾರತೀಯ ಸನಾತನ ಸಂಸ್ಕೃತಿ ಮತ್ತು ತತ್ವದ ದ್ಯೋತಕಗಳಾದ ಆದಿತ್ಯಹೃದಯ, ವಿದುರನೀತಿ, ಭೀಷ್ಮನೀತಿ, ಭಗವದ್ಗೀತೆ ಮುಂತಾದವುಗಳು ರಾಮಾಯಣ ಮಹಾಭಾರತಗಳಲ್ಲಿ ಬಂದಿವೆ.

ಈ ಗ್ರಂಥಗಳಲ್ಲದೆ ವೇದಗಳನ್ನು ಪ್ರಮಾಣವಾಗಿ ಭಾರತದಲ್ಲಿ ಆರು ತತ್ವಶಾಸ್ತ್ರದ ವಿಭಾಗಗಳಿವೆ. ಅವು: ಸಾಂಖ್ಯ, ಯೋಗ, ವೈಶೇಷಿಕ, ನ್ಯಾಯ, ಮೀಮಾಂಸ ಮತ್ತು ವೇದಾಂತ. ಈ ವಿಷಯಗಳಿಗೆ ಸಂಬಂಧಪಟ್ಟ ಕೆಲವು ಸೂತ್ರ, ಭಾಷ್ಯ, ವಾರ್ತಿಕಗಳೆಂಬ ಗ್ರಂಥಗಳಿವೆ. ಈ ಗ್ರಂಥಗಳು ಸ್ಮೃತಿ ಗ್ರಂಥಗಳಲ್ಲದಿದ್ದರೂ ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ ಬಹು ಮುಖ್ಯವಾದವು. ಸಾಂಖ್ಯ ಸೂತ್ರಗಳಲ್ಲಿ ಕಪಿಲ ಮಹರ್ಷಿಯ ಸಾಂಖ್ಯ ಸೂತ್ರಗಳು, ಯೋಗ ತತ್ವದಲ್ಲಿ ಪತಂಜಲಿ ಮಹರ್ಷಿಯ ಯೋಗಸೂತ್ರಗಳು, ವೈಶೇಷಿಕ ತತ್ವದಲ್ಲಿ ಕಣಾದ ಮಹರ್ಷಿಯ ವೈಶೇಷಿಕ ಸೂತ್ರಗಳು, ನ್ಯಾಯಗಳಲ್ಲಿ ಗೌತಮ ಮಹರ್ಷಿಯ ನ್ಯಾಯ ಸೂತ್ರಗಳು, ಮೀಮಾಂಸದಲ್ಲಿ ಜೈಮಿನಿ ಮಹರ್ಷಿಗಳ ಮೀಮಾಂಸಾ ಸೂತ್ರಗಳು ಮತ್ತು ವೇದಾಂತದಲ್ಲಿ ಬಾದರಾಯಣ (ವೇದವ್ಯಾಸರು) ಮಹರ್ಷಿಯ ಬ್ರಹ್ಮಸೂತ್ರಗಳು ಪ್ರಮುಖವಾದವು. ಈ ಸೂತ್ರಗಳಿಗೆ ಅನುಸಾರವಾಗಿ ಈ ತತ್ವಗಳ ಅನುಯಾಯಿಗಳು ಅನೇಕ ಭಾಷ್ಯ, ವಾರ್ತಿಕ ಗ್ರಂಥಗಳನ್ನು ಬರೆದರು.

ಮೇಲೆ ತಿಳಿಸಿದ ಆರು ತತ್ವಗಳಲ್ಲಿ ಮೀಮಾಂಸ ಮತ್ತು ವೇದಾಂತ ತತ್ವಗಳು ಸುಮಾರು 8-9ನೇ ಶತಮಾನಗಳವರೆಗೂ ಆಚರಣೆಯಲ್ಲಿದ್ದವು. ವೇದಾಂತವನ್ನು ಉತ್ತರ ಮೀಮಾಂಸೆಯೆಂದೂ ಕರೆಯುತ್ತಾರೆ. ಕುಮಾರಿಲ ಭಟ್ಟರು ಮತ್ತು ಪ್ರಭಾಕರರು ಮುಖ್ಯವಾದ ಮೀಮಾಂಸಾ ಪಂಡಿತರು. 9ನೇ ಶತಮಾನದ ನಂತರ ವೇದಾಂತ ತತ್ವವು ಪ್ರಸಿದ್ಧವಾಯಿತು. ವೇದಾಂತವು ಮುಖ್ಯವಾಗಿ ಉಪನಿಷತ್ತುಗಳನ್ನು ಆಧರಿಸಿರುವವು. ಇಂದು ನಮ್ಮ ಸಂಪ್ರದಾಯದಲ್ಲಿ ವೇದಾಂತ ಮತವೇ ಮುಖ್ಯವಾಗಿದೆ. ವೇದಾಂತ ತತ್ವದ ಮುಖ್ಯ ಆಚಾರ್ಯರು

ಶಂಕರಾಚಾರ್ಯರು, ರಾಮಾನುಜಾಚಾರ್ಯರು ಮತ್ತು ಮಧ್ವಾಚಾರ್ಯರು. ಈ ಮೂವರು ಆಚಾರ್ಯರ ತತ್ವ ಸಂದೇಶಗಳೂ ಬೇರೆ ಬೇರೆಯಾಗಿದ್ದರೂ ಇವರೆಲ್ಲರೂ ವೇದಾಂತ ಮತದ ಅನುಯಾಯಿಗಳು. ಆಚಾರ್ಯರ ತತ್ವಗಳನ್ನು ಕ್ರಮವಾಗಿ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತವೆಂದು ಕರೆಯುತ್ತಾರೆ. ವೇದಾಂತದ ಮೂರು ಮುಖ್ಯ ಗ್ರಂಥಗಳು ಉಪನಿಷತ್ತುಗಳು, ಬಾದರಾಯಣ ಬ್ರಹ್ಮಸೂತ್ರಗಳು ಮತ್ತು ಮಹಾಭಾರತದ ಭಗವದ್ಗೀತೆ. ಈ ಮೂರು ಗ್ರಂಥಗಳನ್ನು ಪ್ರಸ್ಥಾನತ್ರಯಗಳೆಂದು ಕರೆಯುತ್ತಾರೆ. ಪ್ರಸ್ಥಾನತ್ರಯಗಳಿಗೆ ಮೂರು ಆಚಾರ್ಯರೂ ಭಾಷ್ಯಗಳನ್ನು ಬರೆದಿದ್ದಾರೆ.

ವೇದಗಳು ಅನಂತ ಗ್ರಂಥ ರಾಶಿ. ಈ ವೇದ ಗ್ರಂಥಗಳ ಪರಿಚಯದ ಒಂದು ಸಣ್ಣ ಪ್ರಯತ್ನ ಈ ಲೇಖನ ಮಾಲೆ. ಇಲ್ಲಿ ನನ್ನ ಯಾವುದೇ ಸ್ವಂತ ಕೆಲಸವಿಲ್ಲ. ಇದು ವಿಷಯಗಳ ಸಂಪಾದನೆ. ಪ್ರಸ್ತುತ ಲೇಖನ ಮಾಲೆಯ ಮುಖ್ಯ ಆಕಾರ ಗ್ರಂಥ ಹೆಚ್.ಪಿ. ವೆಂಕಟರಾಯರ ಋಗ್ವೇದ ಸಾಯಣಭಾಷ್ಯದ ಕನ್ನಡ ಅನುವಾದದ ಪೂರ್ವ ಪೀಠಿಕೆ. ಇದಲ್ಲದೆ ಅವಶ್ಯವಿರುವ ಕಡೆ ಬೇರೆ ಗ್ರಂಥಗಳ ಸಹಾಯ ಪಡೆದಿದ್ದೇನೆ. https://vijnasu.github.io/vedas-in-kannada/ ವೇದ ವಿಜ್ಞಾನ ಮತ್ತು ಗಣಕ ತಂತ್ರಜ್ಞಾನ ಖ್ಯಾತಿಯ ಹೇಮಂತ್ ಕುಮಾರ್ ಜಿ ಇವರಿಂದ ಅಂತರ್ಜಾಲ ಮಾಧ್ಯಮದ ಮುಖೇನ ವೈದಿಕ ಸಾಹಿತ್ಯವನ್ನು ಕನ್ನಡಿಗರಿಗೆ ಮುಕ್ತವಾಗಿ ತಲುಪಿಸುವ ಅಳಿಲು ಸೇವೆಯ ಸಹಾಯ ಪಡೆದಿದ್ದೇನೆ. ಅವರಿಗೆ ನಮ್ಮ ಕೃತಜ್ಞತೆಗಳು.

ಓಂ ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥

ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ । ತಸ್ಮಾದ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಯದಕ್ಷರ ಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ । ತತ್ಸರ್ವಂ ಕ್ಷಮ್ಯತಾ ದೇವಾ ವಾಗೀಶ್ವರ ನಮೋಸ್ತುತೇ ॥

॥ ಶ್ರೀ॒ ಗು॒ರು॒ಭ್ಯೋ॒ ನ॒ಮಃ॒ । ಹರಿಃ ಓಂ ॥

ಓಂ ಗ॒ಣಾನಾ᳚ಂ ತ್ವಾ ಗ॒ಣಪ॑ತಿಗ್ಂ ಹವಾಮಹೇ ಕ॒ವಿಂ ಕ॑ವೀ॒ನಾಮು॑ಪ॒ಮಶ್ರ॑ವಸ್ತಮಂ । ಜ್ಯೇ॒ಷ್ಠ॒ರಾಜಂ॒ ಬ್ರಹ್ಮ॑ಣಾಂ ಬ್ರಹ್ಮಣಸ್ಪತ॒ ಆ ನಃ॑ ಶೃ॒ಣ್ವನ್ನೂ॒ತಿಭಿಃ॑ ಸೀದ॒ ಸಾದ॑ನಂ ॥ ಶ್ರೀ ಮಹಾಗಣಪತಯೇ॒ ನಮಃ॑ ॥

ಓಂ ಪ್ರ ಣೋ॑ ದೇ॒ವೀ ಸರ॑ಸ್ವತೀ॒ ವಾಜೇ॑ಭಿರ್ವಾ॒ಜಿನೀ॑ವತೀ । ಧೀ॒ನಾಮ॑ವಿ॒ತ್ರ್ಯ॑ವತು । ಆ ನೋ॑ ದಿ॒ವೋ ಬೃ॑ಹ॒ತಃ ಪರ್ವ॑ತಾ॒ದಾ ಸರ॑ಸ್ವತೀ ಯಜ॒ತಾ ಗ॑ಂತು ಯ॒ಜ್ಞಂ ॥ ವಾಗ್ದೇ॒ವ್ಯೈ॑ ನಮಃ॑ ॥

ಓಂ ಭೂಃ । ತತ್ಸ॑ವಿ॒ತುರ್ವರೇ᳚ಣ್ಯ॒ಂ । ಓಂ ಭುವಃ । ಭರ್ಗೋ॑ ದೇವಸ್ಯ ಧೀಮಹಿ । ಓಂ ಸುವಃ । ಧಿಯೋ॒ ಯೋ ನಃ॑ ಪ್ರ॒ಚೋದಯಾ᳚ತ್ । ಓಂ ಭೂರ್ಭುವ॒ಸ್ಸುವಃ॑ । ತತ್ಸ॑ವಿ॒ತುರ್ವರೇ᳚ಣ್ಯ॒ಂ ಭರ್ಗೋ॑ ದೇ॒ವಸ್ಯ॑ ಧೀಮಹಿ । ಧಿಯೋ॒ ಯೋ ನಃ॑ ಪ್ರ॒ಚೋದಯಾ᳚ತ್ ॥ ವೇದಮಾತಾ ಗಾಯತ್ರ್ಯೈ॑ ನಮಃ॑ ॥

ಓಂ ಅ॒ಗ್ನಿಮೀ᳚ಳೇ ಪು॒ರೋಹಿ॑ತಂ ಯ॒ಜ್ಞಸ್ಯ॑ ದೇ॒ವಮೃ॒ತ್ವಿಜ᳚ಂ । ಹೋತಾ᳚ರಂ ರತ್ನ॒ಧಾತ॑ಮಂ ॥ ಋಗ್ವೇದಾಯ ನಮಃ ॥

ಓಂ ಇ॒ಷೇ ತ್ವೋ॒ರ್ಜೇ ತ್ವಾ॑ ವಾ॒ಯವ॑ಃ ಸ್ಥೋಪಾ॒ಯವ॑ಸ್ಥ ದೇ॒ವೋ ವ॑ಸ್ಸವಿ॒ತಾ ಪ್ರಾರ್ಪ॑ಯತು॒ ಶ್ರೇಷ್ಠ॑ತಮಾಯ॒ ಕರ್ಮ॑ಣ॒ ಆ ಪ್ಯಾ॑ಯಧ್ವಮಘ್ನಿಯಾ ದೇವಭಾ॒ಗಮೂರ್ಜ॑ಸ್ವತೀಃ ಪಯ॑ಸ್ವತೀಃ ಪ್ರ॒ಜಾವ॑ತೀರನಮೀ॒ವಾ ಅ॑ಯ॒ಕ್ಷ್ಮಾ ಮಾ ವ॑ಸ್ತೇ॒ನ ಈಶತ॒ ಮಾಽಘಶಗ್ಂಸೋ॒ ರು॒ದ್ರಸ್ಯ॑ ಹೇ॒ತಿಃ ಪರಿ॑ ವೋ ವೃಣಕ್ತು॒ ಧ್ರು॒ವಾ ಅ॒ಸ್ಮಿನ್ಗೋಪ॑ತೌ ಸ್ಯಾತ ಬ॒ಹ್ವೀರ್ಯಜ॑ಮಾನಸ್ಯ ಪ॒ಶೂನ್ಪಾ॑ಹಿ ॥ ಯಜುರ್ವೇದಾಯ ನಮಃ॑ ॥

ಓಂ ಅಗ್ನ॒ ಆಯಾ॑ಹಿ ವೀ॒ತಯೇ॑ । ಗೃ॒ಣಾನೋ॒ ಹ॒ವ್ಯದಾ॑ತಯೇ । ನಿಹೋತಾ॑ ಸತ್ಸಿ॒ ಬ॒ರ್ಹಿಷಿ॑ ॥ ಸಾಮವೇದಾಯ ನಮಃ ॥

ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥ ಅಥರ್ವವೇದಾಯ ನಮಃ ॥

# 3 ಶಾಂತಿ ಮಂತ್ರ

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ॥ ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ ॥ ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ ॥ ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 1 ॥

ಓಂ ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಬೃಹತೇ ಕರೋಮಿ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 2 ॥

ಓಂ ನಮೋ ವಾಚೇ ಯಾ ಚೋದಿತಾ ಯಾ ಚಾನುದಿತಾ ತಸ್ಯೈ ವಾಚೇ ನಮೋ ನಮೋ ವಾಚೇ ನಮೋ ವಾಚಸ್ಪತಯೇ ನಮ ಋಷಿಭ್ಯೋ ಮಂತ್ರಕೃದ್ಭ್ಯೋ ಮಂತ್ರಪತಿಭ್ಯೋ ಮಾ ಮಾಮೃಷಯೋ ಮಂತ್ರಕೃತೋ ಮಂತ್ರಪತಯಃ ಪರಾದುರ್ಮಾಽಹಮೃಷೀನ್ಮಂತ್ರಕೃತೋ ಮಂತ್ರಪತೀನ್ ಪರಾದಾಂ ವೈಶ್ವದೇವೀಂ ವಾಚಮುದ್ಯಾಸಗ್ಂ ಶಿವಾಮದಸ್ತಾಂ ಜುಷ್ಟಾಂ ದೇವೇಭ್ಯಃ ಶರ್ಮ ಮೇ ದ್ಯೌಃ ಶರ್ಮ ಪೃಥಿವೀ ಶರ್ಮ ವಿಶ್ವಮಿದಂ ಜಗತ್ । ಶರ್ಮ ಚಂದ್ರಶ್ಚ ಸೂರ್ಯಶ್ಚ ಶರ್ಮ ಬ್ರಹ್ಮಪ್ರಜಾಪತೀ ॥

ಭೂತಂ ವದಿಷ್ಯೇ ಭುವನಂ ವದಿಷ್ಯೇ ತೇಜೋ ವದಿಷ್ಯೇ ಯಶೋ ವದಿಷ್ಯೇ ತಪೋ ವದಿಷ್ಯೇ ಬ್ರಹ್ಮ ವದಿಷ್ಯೇ ಸತ್ಯಂ ವದಿಷ್ಯೇ ತಸ್ಮಾ ಅಹಮಿದಮುಪಸ್ತರಣಮುಪಸ್ತೃಣ ಉಪಸ್ತರಣಂ ಮೇ ಪ್ರಜಾಯೈ ಪಶೂನಾಂ ಭೂಯಾದುಪಸ್ತರಣಮಹಂ ಪ್ರಜಾಯೈ ಪಶೂನಾಂ ಭೂಯಾಸಂ ಪ್ರಾಣಾಪಾನೌ

ಮೃತ್ಯೋರ್ಮಾ ಪಾತಂ ಪ್ರಾಣಾಪಾನೌ ಮಾ ಮಾ ಹಾಸಿಷ್ಟಂ ಮಧು ಮನಿಷ್ಯೇ ಮಧು ಜನಿಷ್ಯೇ ಮಧು ವಕ್ಷ್ಯಾಮಿ ಮಧು ವದಿಷ್ಯಾಮಿ ಮಧುಮತೀಂ ದೇವೇಭ್ಯೋ ವಾಚಮುದ್ಯಾಸಗ್ಂ ಶುಶ್ರೂಷೇಣ್ಯಾಂ ಮನುಷ್ಯೇಭ್ಯಸ್ತಂ ಮಾ ದೇವಾ ಅವಂತು ಶೋಭಾಯೈ ಪಿತರೋಽನುಮದಂತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 3 ॥

ಓಂ ಶಂ ನೋ ವಾತಃ ಪವತಾಂ ಮಾತರಿಶ್ವಾ ಶಂ ನಸ್ತಪತು ಸೂರ್ಯಃ । ಅಹಾನಿ ಶಂ ಭವಂತು ನಃ ಶಗ್ಂ ರಾತ್ರಿಃ ಪ್ರತಿ ಧೀಯತಾಂ ॥ ಶಮುಷಾ ನೋ ವ್ಯುಚ್ಛತು ಶಮಾದಿತ್ಯ ಉದೇತು ನಃ । ಶಿವಾ ನಃ ಶಂತಮಾ ಭವ ಸುಮೃಡೀಕಾ ಸರಸ್ವತಿ ॥ ಮಾ ತೇ ವ್ಯೋಮ ಸಂದೃಶಿ । ಇಡಾಯೈ ವಾಸ್ತ್ವಸಿ ವಾಸ್ತುಮದ್ವಾಸ್ತುಮಂತೋ ಭೂಯಾಸ್ಮ ಮಾ ವಾಸ್ತೋಶ್ಛಿಥ್ಸ್ಮಹ್ಯವಾಸ್ತುಃ ಸ ಭೂಯಾದ್ಯೋಽಸ್ಮಾಂದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ ॥ ಪ್ರತಿಷ್ಠಾಽಸಿ ಪ್ರತಿಷ್ಠಾವಂತೋ ಭೂಯಾಸ್ಮ ಮಾ ಪ್ರತಿಷ್ಠಾಯಾಶ್ಛಿಥ್ಸ್ಮಹ್ಯಪ್ರತಿಷ್ಠಃ ಸ ಭೂಯಾದ್ಯೋಽಸ್ಮಾಂದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ । ಆ ವಾತ ವಾಹಿ ಭೇಷಜಂ ವಿ ವಾತ ವಾಹಿ ಯದ್ರಪಃ ॥ ತ್ವಗ್ಂಹಿ ವಿಶ್ವಭೇಷಜೋ ದೇವಾನಾಂ ದೂತ ಈಯಸೇ । ದ್ವಾವಿಮೌ ವಾತೌ ವಾತ ಆಸಿಂಧೋರಾಪರಾವತಃ ॥

ದಕ್ಷಂ ಮೇ ಅನ್ಯ ಆವಾತು ಪರಾಽನ್ಯೋ ವಾತು ಯದ್ರಪಃ । ಯದದೋ ವಾತ ತೇ ಗೃಹೇಽಮೃತಸ್ಯ ನಿಧಿರ್ಹಿತಃ ॥ ತತೋ ನೋ ದೇಹಿ ಜೀವಸೇ ತತೋ ನೋ ಧೇಹಿ ಭೇಷಜಂ । ತತೋ ನೋ ಮಹ ಆವಹ ವಾತ ಆವಾತು ಭೇಷಜಂ ॥ ಶಂಭೂರ್ಮಯೋಭೂರ್ನೋ ಹೃದೇ ಪ್ರ ಣ ಆಯೂಗ್ಂಷಿ ತಾರಿಷತ್ । ಇಂದ್ರಸ್ಯ ಗೃಹೋಽಸಿ ತಂ ತ್ವಾ ಪ್ರಪದ್ಯೇ ಸಗುಸ್ಸಾಶ್ವಃ ॥ ಸಹ ಯನ್ಮೇ ಅಸ್ತಿ ತೇನ । ಭೂಃ ಪ್ರಪದ್ಯೇ ಭುವಃ ಪ್ರಪದ್ಯೇ ಸುವಃ ಪ್ರಪದ್ಯೇ ಭೂರ್ಭುವಸ್ಸುವಃ ಪ್ರಪದ್ಯೇ ವಾಯುಂ ಪ್ರಪದ್ಯೇಽನಾರ್ತಾಂ ದೇವತಾಂ ಪ್ರಪದ್ಯೇಽಶ್ಮಾನಮಾಖಣಂ ಪ್ರಪದ್ಯೇ ಪ್ರಜಾಪತೇರ್ಬ್ರಹ್ಮಕೋಶಂ ಬ್ರಹ್ಮ ಪ್ರಪದ್ಯ ಓಂ ಪ್ರಪದ್ಯೇ ॥ ಅಂತರಿಕ್ಷಂ ಮ ಉರ್ವಂತರಂ ಬೃಹದಗ್ನಯಃ ಪರ್ವತಾಶ್ಚ ಯಯಾ ವಾತಸ್ಸ್ವಸ್ತ್ಯಾ ಸ್ವಸ್ತಿ ಮಾಂ ತಯಾ ಸ್ವಸ್ತ್ಯಾ ಸ್ವಸ್ತಿ ಮಾನಸಾನಿ । ಪ್ರಾಣಾಪಾನೌ ಮೃತ್ಯೋರ್ಮಾ ಪಾತಂ

ಪ್ರಾಣಾಪಾನೌ ಮಾ ಮಾ ಹಾಸಿಷ್ಟಂ ಮಯಿ ಮೇಧಾಂ ಮಯಿ ಪ್ರಜಾಂ ಮಯ್ಯಗ್ನಿಸ್ತೇಜೋ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯಿ ಸೂರ್ಯೋ ಭ್ರಾಜೋ ದಧಾತು ॥

ದ್ಯುಭಿರಕ್ತುಭಿಃ ಪರಿಪಾತಮಸ್ಮಾನರಿಷ್ಟೇಭಿರಶ್ವಿನಾ ಸೌಭಗೇಭಿಃ । ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಸ್ಸಿಂಧುಃ ಪೃಥಿವೀ ಉತ ದ್ಯೌಃ ॥ ಕಯಾ ನಶ್ಚಿತ್ರ ಆಭುವದೂತೀ ಸದಾವೃಧಸ್ಸಖಾ । ಕಯಾ ಶಚಿಷ್ಠಯಾ ವೃತಾ ॥ ಕಸ್ತ್ವಾ ಸತ್ಯೋ ಮದಾನಾಂ ಮಗ್ಂಹಿಷ್ಠೋ ಮತ್ಸದಂಧಸಃ । ದೃಢಾ ಚಿದಾರುಜೇ ವಸು ॥ ಅಭೀ ಷು ಣಃ ಸಖೀನಾಮವಿತಾ ಜರಿತೄಣಾಂ । ಶತಂ ಭವಾಸ್ಯೂತಿಭಿಃ ॥ ವಯಃ ಸುಪರ್ಣಾ ಉಪಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ । ಅಪ ಧ್ವಾಂತಮೂರ್ಣುಹಿ ಪೂರ್ಧಿ ಚಕ್ಷುರ್ಮುಮುಗ್ಧ್ಯಸ್ಮಾನ್ನಿಧಯೇವ ಬದ್ಧಾನ್ ॥ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥

ಈಶಾನಾ ವಾರ್ಯಾಣಾಂ ಕ್ಷಯಂತೀಶ್ಚರ್ಷಣೀನಾಂ । ಅಪೋ ಯಾಚಾಮಿ ಭೇಷಜಂ ॥ ಸುಮಿತ್ರಾ ನ ಆಪ ಓಷಧಯಸ್ಸಂತು ದುರ್ಮಿತ್ರಾಸ್ತಸ್ಮೈ ಭೂಯಾಸುರ್ಯೋಽಸ್ಮಾಂದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ ॥ ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ । ಉಶತೀರಿವ ಮಾತರಃ ॥ ತಸ್ಮಾ ಅರಂ ಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ । ಆಪೋ ಜನಯಥಾ ಚ ನಃ ॥

ಪೃಥಿವೀ ಶಾಂತಾ ಸಾಽಗ್ನಿನಾ ಶಾಂತಾ ಸಾ ಮೇ ಶಾಂತಾ ಶುಚಗ್ಂ ಶಮಯತು । ಅಂತರಿಕ್ಷಗ್ಂ ಶಾಂತಂ ತದ್ವಾಯುನಾ ಶಾಂತಂ ತನ್ಮೇ ಶಾಂತಗ್ಂ ಶುಚಗ್ಂ ಶಮಯತು ॥ ದ್ಯೌಃ ಶಾಂತಾ ಸಾಽಽದಿತ್ಯೇನ ಶಾಂತಾ ಸಾ ಮೇ ಶಾಂತಾ ಶುಚಗ್ಂ ಶಮಯತು । ಪೃಥಿವೀ ಶಾಂತಿರಂತರಿಕ್ಷಗ್ಂ ಶಾಂತಿರ್ದ್ಯೌಃ ಶಾಂತಿರ್ದಿಶಃ ಶಾಂತಿರವಾಂತರದಿಶಾಃ ಶಾಂತಿರಗ್ನಿಃ ಶಾಂತಿರ್ವಾಯುಃ ಶಾಂತಿರಾದಿತ್ಯಃ ಶಾಂತಿಶ್ಚಂದ್ರಮಾಃ ಶಾಂತಿರ್ನಕ್ಷತ್ರಾಣಿ

ಶಾಂತಿರಾಪಃ ಶಾಂತಿರೋಷಧಯಃ ಶಾಂತಿರ್ವನಸ್ಪತಯಃ ಶಾಂತಿರ್ಗೌಃ ಶಾಂತಿರಜಾ ಶಾಂತಿರಶ್ವಃ ಶಾಂತಿಃ ಪುರುಷಃ ಶಾಂತಿರ್ಬ್ರಹ್ಮ ಶಾಂತಿರ್ಬ್ರಾಹ್ಮಣಃ ಶಾಂತಿಃ ಶಾಂತಿರೇವ ಶಾಂತಿಃ ಶಾಂತಿರ್ಮೇ ಅಸ್ತು ಶಾಂತಿಃ । ತಯಾಹಗ್ಂ ಶಾಂತ್ಯಾ ಸರ್ವಶಾಂತ್ಯಾ ಮಹ್ಯಂ ದ್ವಿಪದೇ ಚತುಷ್ಪದೇ ಚ ಶಾಂತಿಂ ಕರೋಮಿ ಶಾಂತಿರ್ಮೇ ಅಸ್ತು ಶಾಂತಿಃ ॥

ಏಹ ಶ್ರೀಶ್ಚ ಹ್ರೀಶ್ಚ ಧೃತಿಶ್ಚ ತಪೋ ಮೇಧಾ ಪ್ರತಿಷ್ಠಾ ಶ್ರದ್ಧಾ ಸತ್ಯಂ ಧರ್ಮಶ್ಚೈತಾನಿ ಮೋತ್ತಿಷ್ಠಂತಮನೂತ್ತಿಷ್ಠಂತು ಮಾ ಮಾಗ್ ಶ್ರೀಶ್ಚ ಹ್ರೀಶ್ಚ ಧೃತಿಶ್ಚ ತಪೋ ಮೇಧಾ ಪ್ರತಿಷ್ಠಾ ಶ್ರದ್ಧಾ ಸತ್ಯಂ ಧರ್ಮಶ್ಚೈತಾನಿ ಮಾ ಮಾ ಹಾಸಿಷುಃ । ಉದಾಯುಷಾ ಸ್ವಾಯುಷೋದೋಷಧೀನಾಗ್ಂ ರಸೇನೋತ್ಪರ್ಜನ್ಯಸ್ಯ ಶುಷ್ಮೇಣೋದಸ್ಥಾಮಮೃತಾಗ್ಂ ಅನು ॥ ತಚ್ಚಕ್ಷುರ್ದೇವಹಿತಂ ಪುರಸ್ತಾಚ್ಛುಕ್ರಮುಚ್ಚರತ್ । ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ನಂದಾಮ ಶರದಃ ಶತಂ ಮೋದಾಮ ಶರದಃ ಶತಂ ಭವಾಮ ಶರದಃ ಶತಗ್ಂ ಶೃಣವಾಮ ಶರದಃ ಶತಂ ಪ್ರಬ್ರವಾಮ ಶರದಃ ಶತಮಜೀತಾಸ್ಸ್ಯಾಮ ಶರದಃ ಶತಂ ಜ್ಯೋಕ್ಚ ಸೂರ್ಯಂ ದೃಶೇ ॥ ಯ ಉದಗಾನ್ಮಹತೋಽರ್ಣವಾದ್ವಿಭ್ರಾಜಮಾನಸ್ಸರಿರಸ್ಯ ಮಧ್ಯಾಥ್ಸ ಮಾ ವೃಷಭೋ ಲೋಹಿತಾಕ್ಷಸ್ಸೂರ್ಯೋ ವಿಪಶ್ಚಿನ್ಮನಸಾ ಪುನಾತು ॥

ಬ್ರಹ್ಮಣಃ ಶ್ಚೋತನ್ಯಸಿ ಬ್ರಹ್ಮಣ ಆಣೀ ಸ್ಥೋ ಬ್ರಹ್ಮಣ ಆವಪನಮಸಿ ಧಾರಿತೇಯಂ ಪೃಥಿವೀ ಬ್ರಹ್ಮಣಾ ಮಹೀ ಧಾರಿತಮೇನೇನ ಮಹದಂತರಿಕ್ಷಂ ದಿವಂ ದಾಧಾರ ಪೃಥಿವೀಗ್ಂ ಸದೇವಾಂ ಯದಹಂ ವೇದ ತದಹಂ ಧಾರಯಾಣಿ ಮಾ ಮದ್ವೇದೋಽಧಿ ವಿಸ್ರಸತ್ । ಮೇಧಾಮನೀಷೇ ಮಾಽಽವಿಶತಾಗ್ಂ ಸಮೀಚೀ ಭೂತಸ್ಯ ಭವ್ಯಸ್ಯಾವರುದ್ಧ್ಯೈ ಸರ್ವಮಾಯುರಯಾಣಿ ಸರ್ವಮಾಯುರಯಾಣಿ ॥ ಆಭಿರ್ಗೀರ್ಭಿರ್ಯದತೋ ನ ಊನಮಾಪ್ಯಾಯಯ ಹರಿವೋ ವರ್ಧಮಾನಃ । ಯದಾ ಸ್ತೋತೃಭ್ಯೋ ಮಹಿ ಗೋತ್ರಾ ರುಜಾಸಿ ಭೂಯಿಷ್ಠಭಾಜೋ ಅಧ ತೇ ಸ್ಯಾಮ ॥ ಬ್ರಹ್ಮ ಪ್ರಾವಾದಿಷ್ಮ ತನ್ನೋ ಮಾ ಹಾಸೀತ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 4 ॥

ಓಂ ಸಂ ತ್ವಾ ಸಿಂಚಾಮಿ ಯಜುಷಾ ಪ್ರಜಾಮಾಯುರ್ಧನಂ ಚ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 5 ॥

ಓಂ ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ ॥ ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ ॥ ನಮೋ ಬ್ರಹ್ಮಣೇ । ನಮಸ್ತೇ ವಾಯೋ ॥ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ ॥ ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ ॥ ತನ್ಮಾಮವತು । ತದ್ವಕ್ತಾರಮವತು ॥ ಅವತು ಮಾಂ । ಅವತು ವಕ್ತಾರಂ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 6 ॥

ಓಂ ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ ॥ ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ ॥ ನಮೋ ಬ್ರಹ್ಮಣೇ । ನಮಸ್ತೇ ವಾಯೋ ॥ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಂ ॥ ಋತಮವಾದಿಷಂ । ಸತ್ಯಮವಾದಿಷಂ ॥ ತನ್ಮಾಮಾವೀತ್ । ತದ್ವಕ್ತಾರಮಾವೀತ್ ॥ ಆವೀನ್ಮಾಂ । ಆವೀದ್ವಕ್ತಾರಂ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 6 ॥

ಓಂ ತಚ್ಛಂ ಯೋರಾವೃಣೀಮಹೇ । ಗಾತುಂ ಯಜ್ಞಾಯ ॥ ಗಾತುಂ ಯಜ್ಞಪತಯೇ । ದೈವೀ ಸ್ವಸ್ತಿರಸ್ತು ನಃ ॥ ಸ್ವಸ್ತಿರ್ಮಾನುಷೇಭ್ಯಃ । ಊರ್ಧ್ವಂ ಜಿಗಾತು ಭೇಷಜಂ ॥ ಶಂ ನೋ ಅಸ್ತು ದ್ವಿಪದೇ । ಶಂ ಚತುಷ್ಪದೇ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 7 ॥

ಓಂ ಸಹ ನಾವವತು । ಸಹ ನೌ ಭುನಕ್ತು ॥ ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 8 ॥

ಓಂ ಆಭಿರ್ಗೀರ್ಭಿರ್ಯದತೋ ನ ಊನಮಾಪ್ಯಾಯಯ ಹರಿವೋ ವರ್ಧಮಾನಃ । ಯದಾ ಸ್ತೋತೃಭ್ಯೋ ಮಹಿ ಗೋತ್ರಾ ರುಜಾಸಿ ಭೂಯಿಷ್ಠಭಾಜೋ ಅಧ ತೇ ಸ್ಯಾಮ ॥ ಬ್ರಹ್ಮ ಪ್ರಾವಾದಿಷ್ಮ ತನ್ನೋ ಮಾ ಹಾಸೀತ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 9 ॥

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 10 ॥

ಓಂ ಯಶ್ಛಂದಸಾಮೃಷಭೋ ವಿಶ್ವರೂಪಃ । ಛಂದೋಭ್ಯೋಽಧ್ಯಮೃತಾಥ್ಸಂಬಭೂವ ॥ ಸ ಮೇಂದ್ರೋ ಮೇಧಯಾ ಸ್ಪೃಣೋತು । ಅಮೃತಸ್ಯ ದೇವ ಧಾರಣೋ ಭೂಯಾಸಂ ॥ ಶರೀರಂ ಮೇ ವಿಚರ್ಷಣಂ । ಜಿಹ್ವಾ ಮೇ ಮಧುಮತ್ತಮಾ ॥ ಕರ್ಣಾಭ್ಯಾಂ ಭೂರಿ ವಿಶ್ರುವಂ । ಬ್ರಹ್ಮಣಃ ಕೋಶೋಽಸಿ ಮೇಧಯಾಽಪಿಹಿತಃ ॥ ಶ್ರುತಂ ಮೇ ಗೋಪಾಯ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 11 ॥

ಓಂ ಆ ಬ್ರಹ್ಮನ್ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಮಾಸ್ಮಿನ್ರಾಷ್ಟ್ರೇ ರಾಜನ್ಯ ಇಷವ್ಯಃ ಶೂರೋ ಮಹಾರಥೋ ಜಾಯತಾಂ ದೋಗ್ಧ್ರೀ ಧೇನುರ್ವೋಢಾನಡ್ವಾನಾಶುಃ ಸಪ್ತಿಃ ಪುರಂಧಿರ್ಯೋಷಾ ಜಿಷ್ಣೂ ರಥೇಷ್ಠಾಃ ಸಭೇಯೋ ಯುವಾಸ್ಯ ಯಜಮಾನಸ್ಯ ವೀರೋ ಜಾಯತಾಂ ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು ಫಲಿನ್ಯೋ ನ ಓಷಧಯಃ ಪಚ್ಯಂತಾಂ ಯೋಗಕ್ಷೇಮೋ ನಃ ಕಲ್ಪತಾಂ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 12 ॥

ಓಂ ಇಡಾ ದೇವಹೂರ್ಮನುರ್ಯಜ್ಞನೀರ್ಬೃಹಸ್ಪತಿರುಕ್ಥಾಮದಾನಿ ಶಗ್ಂಸಿಷದ್ವಿಶ್ವೇ ದೇವಾಃ ಸೂಕ್ತವಾಚಃ ಪೃಥಿವಿ ಮಾತರ್ಮಾ ಮಾ ಹಿಗ್ಂಸೀರ್ಮಧು ಮನಿಷ್ಯೇ ಮಧು ಜನಿಷ್ಯೇ ಮಧು ವಕ್ಷ್ಯಾಮಿ ಮಧು ವದಿಷ್ಯಾಮಿ ಮಧುಮತೀಂ ದೇವೇಭ್ಯೋ ವಾಚಮುದ್ಯಾಸಗ್ಂ ಶುಶ್ರೂಷೇಣ್ಯಾಂ ಮನುಷ್ಯೇಭ್ಯಸ್ತಂ ಮಾ ದೇವಾ ಅವಂತು ಶೋಭಾಯೈ ಪಿತರೋಽನು ಮದಂತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 13 ॥

ಓಂ ವಾಙ್ಮೇ ಮನಸಿ ಪ್ರತಿಷ್ಠಿತಾ । ಮನೋ ಮೇ ವಾಚಿ ಪ್ರತಿಷ್ಠಿತಂ ॥ ಆವಿರಾವೀರ್ಮ ಏಧಿ । ವೇದಸ್ಯಮ ಆಣೀಸ್ಥಃ ॥ ಶ್ರುತಂ ಮೆ ಮಾ ಪ್ರಹಾಸೀಃ । ಅನೇನ ಅಧೀತೇನ ಅಹೋರಾತ್ರಾನ್ ಸಂದಧಾಮಿ ॥ ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ ॥ ತನ್ಮಾಮವತು । ತದ್ವಕ್ತಾರಮವತು ॥ ಅವತು ಮಾಂ । ಅವತು ವಕ್ತಾರಂ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ 14 ॥

# 4 ಸನ್ಯಾಸ ಸೂಕ್ತ

ಓಂ ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ । ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜದೇತದ್ಯತಯೋ ವಿಶಂತಿ ॥ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥ ದಹ್ರಂ ವಿಪಾಪಂ ಪರಮೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಗ್ಗ್‌ಸ್ಥಂ । ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್, ಯದಂತಸ್ತದುಪಾಸಿತವ್ಯಂ ॥ ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

# 5 ಸಂಧ್ಯಾವಂದನ ಮಂತ್ರ

ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ । ಭವೇಭವೇ ನಾತಿಭವೇ ಭವಸ್ವ ಮಾಂ । ಭವೋದ್ಭವಾಯ ನಮಃ ॥ ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಸ್ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ॥ ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರತರೇಭ್ಯಃ । ಸರ್ವೇಭ್ಯಸ್ಸರ್ವ ಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ ॥ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ ॥ ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ ॥

ಮಾ ನಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತೋ ನಮಸಾ ವಿಧೇಮ ತೇ ॥

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ । ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥

ಆಪೋ ಹಿಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ । ಉಶತೀರಿವ ಮಾತರಃ ॥ ತಸ್ಮಾ ಅರಂ ಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ । ಆಪೋ ಜನಯಥಾ ಚ ನಃ ॥

ಸೂರ್ಯಶ್ಚ ಮಾ ಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಂ ॥ ಯದ್ರಾತ್ರಿಯಾ ಪಾಪಮಕಾರ್ಷಂ । ಮನಸಾ ವಾಚಾ ಹಸ್ತಾಭ್ಯಾಂ ॥ ಪದ್ಭ್ಯಾಮುದರೇಣ ಶಿಶ್ನಾ । ರಾತ್ರಿಸ್ತದವಲುಂಪತು ॥ ಯತ್ಕಿಂಚ ದುರಿತಂ ಮಯಿ । ಇದಮಹಂ ಮಾಮಮೃತಯೋನೌ ॥ ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ॥

ಆಪೋ ವಾ ಇದಗ್ಂ ಸರ್ವಂ ವಿಶ್ವಾ ಭೂತಾನ್ಯಾಪಃ ಪ್ರಾಣಾ ವಾ ಆಪಃ ಪಶವ ಆಪೋಽನ್ನಮಾಪೋಽಮೃತಮಾಪಃ ಸಮ್ರಾಡಾಪೋ ವಿರಾಡಾಪಃ ಸ್ವರಾಡಾಪಶ್ಛಂದಾಗ್ಂಸ್ಯಾಪೋ ಜ್ಯೋತೀಗ್ಂಷ್ಯಾಪೋ ಯಜೂಗ್ಂಷ್ಯಾಪಃ ಸತ್ಯಮಾಪಃ ಸರ್ವಾ ದೇವತಾ ಆಪೋ ಭೂರ್ಭುವಃ ಸುವರಾಪ ಓಂ ॥ ಆಪಃ ಪುನಂತು ಪೃಥಿವೀಂ ಪೃಥಿವೀ ಪೂತಾ ಪುನಾತು ಮಾಂ । ಪುನಂತು ಬ್ರಹ್ಮಣಸ್ಪತಿರ್ಬ್ರಹ್ಮ ಪೂತಾ ಪುನಾತು ಮಾಂ ॥ ಯದುಚ್ಛಿಷ್ಟಮಭೋಜ್ಯಂ ಯದ್ವಾ ದುಶ್ಚರಿತಂ ಮಮ । ಸರ್ವಂ ಪುನಂತು ಮಾಮಾಪೋಽಸತಾಂ ಚ ಪ್ರತಿಗ್ರಹಗ್ಗ್ಂ ಸ್ವಾಹಾ ॥

ಅಗ್ನಿಶ್ಚ ಮಾ ಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಂ ॥ ಯದಹ್ನಾ ಪಾಪಮಕಾರ್ಷಂ । ಮನಸಾ ವಾಚಾ ಹಸ್ತಾಭ್ಯಾಂ ॥ ಪದ್ಭ್ಯಾಮುದರೇಣ ಶಿಶ್ನಾ । ಅಹಸ್ತದವಲುಂಪತು ॥ ಯತ್ಕಿಂಚ ದುರಿತಂ ಮಯಿ । ಇದಮಹಂ ಮಾಮಮೃತಯೋನೌ ॥ ಸತ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ ॥

ದಧಿಕ್ರಾವ್ಣ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿ ನೋ ಮುಖಾ ಕರತ್ಪ್ರಣ ಆಯೂಗ್ಂಷಿ ತಾರಿಷತ್ ॥

ಹಗ್ಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥

ಆ ಸತ್ಯೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ । ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾ ವಿಪಶ್ಯನ್ ॥

ಓಮಿತ್ಯೇಕಾಕ್ಷರಂ ಬ್ರಹ್ಮ । ಅಗ್ನಿರ್ದೇವತಾ ಬ್ರಹ್ಮ ಇತ್ಯಾರ್ಷಂ ॥ ಗಾಯತ್ರಂ ಛಂದಂ ಪರಮಾತ್ಮಂ ಸರೂಪಂ । ಸಾಯುಜ್ಯಂ ವಿನಿಯೋಗಂ ॥

ಆಯಾತು ವರದಾ ದೇವೀ ಅಕ್ಷರಂ ಬ್ರಹ್ಮ ಸಮ್ಮಿತಂ । ಗಾಯತ್ರೀಂ ಛಂದಸಾಂ ಮಾತೇದಂ ಬ್ರಹ್ಮ ಜುಷಸ್ವ ಮೇ ॥ ಯದಹ್ನಾತ್ಕುರುತೇ ಪಾಪಂ ತದಹ್ನಾತ್ಪ್ರತಿಮುಚ್ಯತೇ । ಯದ್ರಾತ್ರಿಯಾತ್ಕುರುತೇ ಪಾಪಂ ತದ್ರಾತ್ರಿಯಾತ್ಪ್ರತಿಮುಚ್ಯತೇ ॥ ಸರ್ವವರ್ಣೇ ಮಹಾದೇವಿ ಸಂಧ್ಯಾವಿದ್ಯೇ ಸರಸ್ವತಿ ॥

ಓಜೋಽಸಿ ಸಹೋಽಸಿ ಬಲಮಸಿ ಭ್ರಾಜೋಽಸಿ ದೇವಾನಾಂ ಧಾಮನಾಮಾಽಸಿ ವಿಶ್ವಮಸಿ ವಿಶ್ವಾಯುಸ್ಸರ್ವಮಸಿ ಸರ್ವಾಯುರಭಿಭೂರೋಂ ಗಾಯತ್ರೀಮಾವಾಹಯಾಮಿ ಸಾವಿತ್ರೀಮಾವಾಹಯಾಮಿ ಸರಸ್ವತೀಮಾವಾಹಯಾಮಿ ಛಂದರ್ಷೀನಾವಾಹಯಾಮಿ ಶ್ರಿಯಮಾವಾಹಯಾಮಿ ಗಾಯತ್ರಿಯಾ ಗಾಯತ್ರೀಚ್ಛಂದೋ ವಿಶ್ವಾಮಿತ್ರ ಋಷಿಃ ಸವಿತಾ ದೇವತಾಽಗ್ನಿರ್ಮುಖಂ ಬ್ರಹ್ಮಾ ಶಿರೋ ವಿಷ್ಣುರ್ಹೃದಯಗ್ಂ ರುದ್ರಃ ಶಿಖಾ ಪೃಥಿವೀ ಯೋನಿಃ ಪ್ರಾಣಾಪಾನವ್ಯಾನೋದಾನಸಮಾನಾ ಸಪ್ರಾಣಾ ಶ್ವೇತವರ್ಣಾ ಸಾಂಖ್ಯಾಯನಸಗೋತ್ರಾ ಗಾಯತ್ರೀ ಚತುರ್ವಿಗ್ಂಶತ್ಯಕ್ಷರಾ ತ್ರಿಪದಾ ಷಟಕುಕ್ಷಿಃ ಪಂಚಶೀರ್ಷೋಪನಯನೇ ವಿನಿಯೋಗ ॥

ಓಂ ಭೂಃ । ಓಂ ಭುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ ॥ ಓಗ್ಂ ಸತ್ಯಂ । ಓಂ ತಥ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ

ಯೋ ನಃ ಪ್ರಚೋದಯಾತ್ ॥ ಓಮಾಪೋ ಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಂ ॥

ಮಿತ್ರಸ್ಯ ಚರ್ಷಣೀಧೃತಃ ಶ್ರವೋ ದೇವಸ್ಯ ಸಾನಸಿಂ । ಸತ್ಯಂ ಚಿತ್ರಶ್ರವಸ್ತಮಂ ॥ ಮಿತ್ರೋ ಜನಾನ್ ಯಾತಯತಿ ಪ್ರಜಾನನ್ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ । ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಸತ್ಯಾಯ ಹವ್ಯಂ ಘೃತವದ್ವಿಧೇಮ ॥ ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ ಯಸ್ತ ಆದಿತ್ಯ ಶಿಕ್ಷತಿ ವ್ರತೇನ । ನ ಹನ್ಯತೇ ನ ಜೀಯತೇ ತ್ವೋತೋ ನೈನಮಗ್ಂಹೋ ಅಶ್ನೋತ್ಯಂತಿತೋ ನ ದೂರಾತ್ ॥

ಉದ್ವಯಂ ತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತರಂ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ ॥ ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ॥ ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಽಪ್ರಾ ದ್ಯಾವಾಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥

ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾ ಚ ಕೇ ॥ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಡಮಾನೋ ವರುಣೇಹ ಬೋಧ್ಯುರುಶಗ್ಂ ಸ ಮಾ ನ ಆಯುಃ ಪ್ರ ಮೋಷೀಃ ॥

ನಮಃ ಪ್ರಾಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮೋ ದಕ್ಷಿಣಾಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮಃ ಪ್ರತೀಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮ ಉದೀಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ॥

ನಮಃ ಪ್ರತೀಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮ ಉದೀಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮಃ

ಪ್ರಾಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮೋ ದಕ್ಷಿಣಾಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ॥

ನಮೋ ನಮ ಊರ್ಧ್ವಾಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮೋಽಧರಾಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮೋಽವಾಂತರಾಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮೋ ನಮೋ ಗಂಗಾಯಮುನಯೋರ್ಮಧ್ಯೇ ಯೇ ವಸಂತಿ ತೇ ಮೇ ಪ್ರಸನ್ನಾತ್ಮಾನಶ್ಚಿರಂ ಜೀವಿತಂ ವರ್ಧಯಂತಿ ನಮೋ ಗಂಗಾ ಯಮುನಯೋರ್ಮುನಿಭ್ಯಶ್ಚ ನಮೋ ನಮೋ ಗಂಗಾ ಯಮುನಯೋರ್ಮುನಿಭ್ಯಶ್ಚ ನಮಃ ॥

ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಬೃಹತೇ ಕರೋಮಿ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತಮೂರ್ಧನಿ । ಬ್ರಾಹ್ಮಣೇಭ್ಯೋಽಭ್ಯನುಜ್ಞಾತಾ ಗಚ್ಛ ದೇವಿ ಯಥಾಸುಖಂ ॥ ಸ್ತುತೋ ಮಯಾ ವರದಾ ವೇದಮಾತಾ ಪ್ರಚೋದಯಂತೀ ಪವನೇ ದ್ವಿಜಾತಾ । ಆಯುಃ ಪೃಥಿವ್ಯಾಂ ದ್ರವಿಣಂ ಬ್ರಹ್ಮವರ್ಚಸಂ ಮಹ್ಯಂ ದತ್ವಾ ಪ್ರಜಾತುಂ ಬ್ರಹ್ಮಲೋಕಂ ॥

ಋತಗ್ಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ । ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋ ನಮಃ ॥

# 6 ಅಗ್ನಿಕಾರ್ಯ ಮಂತ್ರ

ಜುಷಸ್ವ ನಃ ಸಮಿಧಮಗ್ನೇ ಅದ್ಯ ಶೋಚಾ ಬೃಹದ್ಯಜತಂ ಧೂಮಮೃಣ್ವನ್ । ಉಪ ಸ್ಪೃಶ ದಿವ್ಯಗ್ಂ ಸಾನು ಸ್ತೂಪೈಃ ಸಗ್ಂ ರಶ್ಮಿಭಿಸ್ತತನಃ ಸೂರ್ಯಸ್ಯ ॥

ಯತ್ತೇ ಅಗ್ನೇ ತೇಜಸ್ತೇನಾಹಂ ತೇಜಸ್ವೀ ಭೂಯಾಸಂ ಯತ್ತೇ ಅಗ್ನೇ ವರ್ಚಸ್ತೇನಾಹಂ ವರ್ಚಸ್ವೀ ಭೂಯಾಸಂ ಯತ್ತೇ ಅಗ್ನೇ ಹರಸ್ತೇನಾಹಗ್ಂ ಹರಸ್ವೀ ಭೂಯಾಸಂ ॥ ಮಯಿ ಮೇಧಾಂ ಮಯಿ ಪ್ರಜಾಂ ಮಯ್ಯಗ್ನಿಸ್ತೇಜೋ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯಿ ಸೂರ್ಯೋ ಭ್ರಾಜೋ ದಧಾತು ॥

ಓಜೋಽಸಿ ಸಹೋಽಸಿ ಬಲಮಸಿ ಭ್ರಾಜೋಽಸಿ ದೇವಾನಾಂ ಧಾಮನಾಮಾಽಸಿ ವಿಶ್ವಮಸಿ ವಿಶ್ವಾಯುಸ್ಸರ್ವಮಸಿ ಸರ್ವಾಯುರಸಿ ॥

# 7 ಪಂಚಗವ್ಯ ಮಂತ್ರ

ಓಂ ಭೂರ್ಭುವಸ್ಸುವಃ । ತಥ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ । ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥

ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಂ । ಭವಾ ವಾಜಸ್ಯ ಸಂಗಥೇ ॥

ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿ ನೋ ಮುಖಾ ಕರತ್ಪ್ರಣ ಆಯೂಗ್ಂಷಿ ತಾರಿಷತ್ ॥

ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ ವಸ್ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ ॥

ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ ॥

ಆಪೋ ಹಿಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ । ಉಶತೀರಿವ ಮಾತರಃ ॥

ತ॒ಸ್ಮಾ॒ ಅರಂ॑ ಗಮಾಮ ವೋ॒ ಯಸ್ಯ॒ ಕ್ಷಯಾ॑ಯ॒ ಜಿನ್ವ॑ಥ । ಆಪೋ॑ ಜ॒ನಯ॑ಥಾ ಚ ನಃ ॥

ಮಾ ನ॑ಸ್ತೋ॒ಕೇ ತನ॑ಯೇ॒ ಮಾ ನ॒ ಆಯು॑ಷಿ॒ ಮಾ ನೋ॒ ಗೋಷು॒ ಮಾ ನೋ॒ ಅಶ್ವೇ॑ಷು ರೀರಿಷಃ । ವೀ॒ರಾನ್ಮಾ ನೋ॑ ರುದ್ರ ಭಾಮಿ॒ತೋ ವ॑ಧೀರ್ಹ॒ವಿಷ್ಮಂ॑ತೋ॒ ನಮ॑ಸಾ ವಿಧೇಮ ತೇ ॥

# 8 ಯಜ್ಞೋಪವೀತ ಅಭಿಮಂತ್ರಣ ಧಾರಣ ಮಂತ್ರ

ಓಂ ಆಪೋ॒ ಹಿಷ್ಠಾ ಮ॑ಯೋ॒ಭುವ॒ಸ್ತಾ ನ॑ ಊ॒ರ್ಜೇ ದ॑ಧಾತನ । ಮ॒ಹೇ ರಣಾ॑ಯ॒ ಚಕ್ಷ॑ಸೇ ॥ ಯೋ ವಃ॑ ಶಿ॒ವತ॑ಮೋ॒ ರಸ॒ಸ್ತಸ್ಯ॑ ಭಾಜಯತೇ॒ಹ ನಃ॑ । ಉ॒ಶ॒ತೀರಿ॑ವ ಮಾ॒ತರಃ॑ ॥ ತ॒ಸ್ಮಾ॒ ಅರಂ॑ ಗಮಾಮ ವೋ॒ ಯಸ್ಯ॒ ಕ್ಷಯಾ॑ಯ॒ ಜಿನ್ವ॑ಥ । ಆಪೋ॑ ಜ॒ನಯ॑ಥಾ ಚ ನಃ ॥

ಓಂ ಭೂರ್ಭುವ॒ಸ್ಸುವಃ॑ । ತತ್ಸ॑ವಿ॒ತುರ್ವರೇ᳚ಣ್ಯ॒ಂ ಭರ್ಗೋ॑ ದೇ॒ವಸ್ಯ॑ ಧೀಮಹಿ । ಧಿಯೋ॒ ಯೋ ನಃ॑ ಪ್ರಚೋ॒ದಯಾ᳚ತ್ ॥

ಉದ್ವ॒ಯಂ ತಮ॑ಸ॒ಸ್ಪರಿ॒ ಪಶ್ಯಂ॑ತೋ॒ ಜ್ಯೋತಿ॒ರುತ್ತ॑ರಂ । ದೇ॒ವಂ ದೇ॑ವ॒ತ್ರಾ ಸೂರ್ಯ॒ಮಗ॑ನ್ಮ॒ ಜ್ಯೋತಿ॑ರುತ್ತ॒ಮಂ ॥ ಉದು॒ ತ್ಯಂ ಜಾ॒ತವೇ॑ದಸಂ ದೇ॒ವಂ ವ॑ಹಂತಿ ಕೇ॒ತವಃ॑ । ದೃ॒ಶೇ ವಿಶ್ವಾ॑ಯ॒ ಸೂರ್ಯ᳚ಂ ॥

ಸ್ಯೋ॒ನಾ ಪೃ॑ಥಿವಿ॒ ಭವಾ॑ನೃಕ್ಷ॒ರಾ ನಿ॒ವೇಶ॑ನೀ । ಯಚ್ಛಾ॑ ನಃ॒ ಶರ್ಮ॑ ಸ॒ಪ್ರಥಾಃ᳚ ॥

ದೇ॒ವಸ್ಯ॑ ತ್ವಾ ಸವಿ॒ತುಃ ಪ್ರ॑ಸ॒ವೇ᳚ಽಶ್ವಿನೋ᳚ರ್ಬಾ॒ಹುಭ್ಯಾ᳚ಂ ಪೂ॒ಷ್ಣೋ ಹಸ್ತಾ॒᳚ಭ್ಯಾಂ ॥

# 9 ಭೋಜನ ಮಂತ್ರ

ಓಂ ಭೂರ್ಭುವ॒ಸ್ಸುವಃ॑ । ತತ್ಸ॑ವಿ॒ತುರ್ವರೇ᳚ಣ್ಯ॒ಂ ಭರ್ಗೋ॑ ದೇ॒ವಸ್ಯ॑ ಧೀಮಹಿ । ಧಿಯೋ॒ ಯೋ ನಃ॑ ಪ್ರಚೋ॒ದಯಾ᳚ತ್ ॥

ಸ॒ತ್ಯಂ ತ್ವ॒ರ್ತೇನ॒ ಪರಿ॑ಷಿಂ॒ಚಾಮಿ । ಋ॒ತಂ ತ್ವಾ॑ ಸ॒ತ್ಯೇನ॒ ಪರಿ॑ಷಿಂ॒ಚಾಮಿ ॥

ಅಂತಶ್ಚರತಿ ಭೂತೇಷು ಗುಹಾಯಾಂ ವಿಶ್ವಮೂರ್ತಿಷು । ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮಿಂದ್ರಸ್ತ್ವಗ್ಂ ರುದ್ರಸ್ತ್ವಂ ವಿಷ್ಣುಸ್ತ್ವಂ ಬ್ರಹ್ಮ ತ್ವಂ ಪ್ರಜಾಪತಿಃ । ತ್ವಂ ತದಾಪ ಆಪೋ ಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಂ ॥

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಗ್ಂ ಸ್ಯಾಮ ಪತಯೋ ರಯೀಣಾಂ ॥

ಅಮೃತೋಪಸ್ತರಣಮಸಿ ಸ್ವಾಹಾ ॥ ಪ್ರಾಣಾಯ ಸ್ವಾಹಾ । ಅಪಾನಾಯ ಸ್ವಾಹಾ । ವ್ಯಾನಾಯ ಸ್ವಾಹಾ । ಉದಾನಾಯ ಸ್ವಾಹಾ । ಸಮಾನಾಯ ಸ್ವಾಹಾ । ಬ್ರಹ್ಮಣೇ ಸ್ವಾಹಾ ॥

ಓಂ ಶ್ರದ್ಧಾಯಾಂ ಪ್ರಾಣೇ ನಿವಿಶ್ಯಾಮೃತಗ್ಂ ಹುತಂ । ಪ್ರಾಣಮನ್ನೇನಾಪ್ಯಾಯಸ್ವ ॥ ಶ್ರದ್ಧಾಯಾಮಪಾನೇ ನಿವಿಶ್ಯಾಮೃತಗ್ಂ ಹುತಂ । ಅಪಾನಮನ್ನೇನಾಪ್ಯಾಯಸ್ವ ॥ ಶ್ರದ್ಧಾಯಾಂ ವ್ಯಾನೇ ನಿವಿಶ್ಯಾಮೃತಗ್ಂ ಹುತಂ । ವ್ಯಾನಮನ್ನೇನಾಪ್ಯಾಯಸ್ವ ॥ ಶ್ರದ್ಧಾಯಾಮುದಾನೇ ನಿವಿಶ್ಯಾಮೃತಗ್ಂ ಹುತಂ । ಉದಾನಮನ್ನೇನಾಪ್ಯಾಯಸ್ವ ॥ ಶ್ರದ್ಧಾಯಾಗ್ಂ ಸಮಾನೇ ನಿವಿಶ್ಯಾಮೃತಗ್ಂ ಹುತಂ । ಸಮಾನಮನ್ನೇನಾಪ್ಯಾಯಸ್ವ ॥

ಓಂ ಶ್ರದ್ಧಾಯಾಂ ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ । ಶ್ರದ್ಧಾಯಾಮಪಾನೇ ನಿವಿಷ್ಟೋಽಮೃತಂ ಜುಹೋಮಿ । ಶ್ರದ್ಧಾಯಾಂ ವ್ಯಾನೇ ನಿವಿಷ್ಟೋಽಮೃತಂ ಜುಹೋಮಿ । ಶ್ರದ್ಧಾಯಾಮುದಾನೇ ನಿವಿಷ್ಟೋಽಮೃತಂ ಜುಹೋಮಿ । ಶ್ರದ್ಧಾಯಾಗ್ಂ ಸಮಾನೇ ನಿವಿಷ್ಟೋಽಮೃತಂ ಜುಹೋಮಿ । ಬ್ರಹ್ಮಣಿ ಮ ಆತ್ಮಾಽಮೃತತ್ವಾಯ ॥ ಅಮೃತೋಪಸ್ತರಣಮಸಿ ॥ ಶ್ರದ್ಧಾಯಾಂ ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ಪ್ರಾಣಾಯ ಸ್ವಾಹಾ ॥ ಶ್ರದ್ಧಾಯಾಮಪಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ಅಪಾನಾಯ ಸ್ವಾಹಾ ॥ ಶ್ರದ್ಧಾಯಾಂ ವ್ಯಾನೇ

ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ವ್ಯಾನಾಯ ಸ್ವಾಹಾ ॥ ಶ್ರದ್ಧಾಯಾಮುದಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ಉದಾನಾಯ ಸ್ವಾಹಾ ॥ ಶ್ರದ್ಧಾಯಾಗ್ಂ ಸಮಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾಪ್ರದಾಹಾಯ । ಸಮಾನಾಯ ಸ್ವಾಹಾ । ಬ್ರಹ್ಮಣಿ ಮ ಆತ್ಮಾಽಮೃತತ್ವಾಯ ॥

ಅಮೃತಾಪಿಧಾನಮಸಿ ಸ್ವಾಹಾ ॥

# 10 ಸೂರ್ಯ/ಸೌರ ಸೂಕ್ತ - ಋಗ್ವೇದೀಯ

ಓಂ ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ॥1॥ ಅಪ ತ್ಯೇ ತಾಯವೋ ಯಥಾ ನಕ್ಷತ್ರಾ ಯಂತ್ಯಕ್ತುಭಿಃ । ಸೂರಾಯ ವಿಶ್ವಚಕ್ಷಸೇ ॥2॥ ಅದೃಶ್ರಮಸ್ಯ ಕೇತವೋ ವಿ ರಶ್ಮಯೋ ಜನಾ ಅನು । ಭ್ರಾಜಂತೋ ಅಗ್ನಯೋ ಯಥಾ ॥3॥ ತರಣಿರ್ವಿಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ । ವಿಶ್ವಮಾ ಭಾಸಿ ರೋಚನಂ ॥4॥ ಪ್ರತ್ಯಙ್ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ । ಪ್ರತ್ಯಙ್ವಿಶ್ವಂ ಸ್ವರ್ದೃಶೇ ॥5॥ ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾ ಅನು । ತ್ವಂ ವರುಣ ಪಶ್ಯಸಿ ॥6॥ ವಿ ದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ । ಪಶ್ಯಂಜನ್ಮಾನಿ ಸೂರ್ಯ ॥7॥ ಸಪ್ತ ತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ । ಶೋಚಿಷ್ಕೇಶಂ ವಿಚಕ್ಷಣ ॥8॥ ಅಯುಕ್ತ ಸಪ್ತ ಶುಂಧ್ಯುವಃ ಸೂರೋ ರಥಸ್ಯ ನಪ್ತ್ಯಃ । ತಾಭಿರ್ಯಾತಿ ಸ್ವಯುಕ್ತಿಭಿಃ ॥9॥ ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಂ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ ॥10॥ ಉದ್ಯನ್ನದ್ಯ ಮಿತ್ರಮಹ ಆರೋಹನ್ನುತ್ತರಾಂ ದಿವಂ । ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥11॥ ಶುಕೇಷು ಮೇ ಹರಿಮಾಣಂ ರೋಪಣಾಕಾಸು ದಧ್ಮಸಿ । ಅಥೋ ಹಾರಿದ್ರವೇಷು ಮೇ ಹರಿಮಾಣಂ ನಿ ದಧ್ಮಸಿ ॥12॥ ಉದಗಾದಯಮಾದಿತ್ಯೋ ವಿಶ್ವೇನ ಸಹಸಾ ಸಹ । ದ್ವಿಷಂತಂ ಮಹ್ಯಂ ರಂಧಯನ್ಮೋ ಅಹಂ ದ್ವಿಷತೇ ರಧಂ

॥13॥ ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥14॥ ಸೂರ್ಯೋ ದೇವೀಮುಷಸಂ ರೋಚಮಾನಾಂ ಮರ್ಯೋ ನ ಯೋಷಾಮಭ್ಯೇತಿ ಪಶ್ಚಾತ್ । ಯತ್ರಾ ನರೋ ದೇವಯಂತೋ ಯುಗಾನಿ ವಿತನ್ವತೇ ಪ್ರತಿ ಭದ್ರಾಯ ಭದ್ರಂ ॥15॥ ಭದ್ರಾ ಅಶ್ವಾ ಹರಿತಃ ಸೂರ್ಯಸ್ಯ ಚಿತ್ರಾ ಏತಗ್ವಾ ಅನುಮಾದ್ಯಾಸಃ । ನಮಸ್ಯಂತೋ ದಿವ ಆ ಪೃಷ್ಠಮಸ್ಥುಃ ಪರಿ ದ್ಯಾವಾಪೃಥಿವೀ ಯಂತಿ ಸದ್ಯಃ ॥16॥ ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾ ಕರ್ತೋರ್ವಿತತಂ ಸಂ ಜಭಾರ । ಯದೇದಯುಕ್ತ ಹರಿತಃ ಸಧಸ್ಥಾದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ ॥17॥ ತನ್ಮಿತ್ರಸ್ಯ ವರುಣಸ್ಯಾಭಿಚಕ್ಷೇ ಸೂರ್ಯೋ ರೂಪಂ ಕೃಣುತೇ ದ್ಯೋರುಪಸ್ಥೇ । ಅನಂತಮನ್ಯದ್ರುಶದಸ್ಯ ಪಾಜಃ ಕೃಷ್ಣಮನ್ಯದ್ಧರಿತಃ ಸಂ ಭರಂತಿ ॥18॥ ಅದ್ಯಾ ದೇವಾ ಉದಿತಾ ಸೂರ್ಯಸ್ಯ ನಿರಂಹಸಃ ಪಿಪೃತಾ ನಿರವದ್ಯಾತ್ । ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥19॥ ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥20॥ ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ । ತ ಆವವೃತ್ರಂತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ ವ್ಯುದ್ಯತೇ ॥21॥ ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ॥22॥ ಯತ್ತ್ವಾ ಸೂರ್ಯ ಸ್ವರ್ಭಾನುಸ್ತಮಸಾವಿಧ್ಯದಾಸುರಃ । ಅಕ್ಷೇತ್ರವಿದ್ಯಥಾ ಮುಗ್ಧೋ ಭುವನಾನ್ಯದೀಧಯುಃ ॥23॥ ಯದದ್ಯ ಸೂರ್ಯ ಬ್ರವೋಽನಾಗಾ ಉದ್ಯನ್ಮಿತ್ರಾಯ ವರುಣಾಯ ಸತ್ಯಂ । ವಯಂ ದೇವತ್ರಾದಿತೇ ಸ್ಯಾಮ ತವ ಪ್ರಿಯಾಸೋ ಅರ್ಯಮನ್ಗೃಣಂತಃ ॥24॥ ಉತ್ಸೂರ್ಯೋ ಬೃಹದರ್ಚೀಂಷ್ಯಶ್ರೇತ್ಪುರು ವಿಶ್ವಾ ಜನಿಮ ಮಾನುಷಾಣಾಂ । ಸಮೋ ದಿವಾ ದದೃಶೇ ರೋಚಮಾನಃ ಕ್ರತ್ವಾ ಕೃತಃ ಸುಕೃತಃ ಕರ್ತೃಭಿರ್ಭೂತ್ ॥25॥ ಸ ಸೂರ್ಯ ಪ್ರತಿ ಪುರೋ ನ ಉದ್ಗಾ ಏಭಿಃ

ಸ್ತೋಮೇಭಿರೇತಶೇಭಿರೇವೈಃ । ಪ್ರ ನೋ ಮಿತ್ರಾಯ ವರುಣಾಯ ವೋಚೋಽನಾಗಸೋ ಅರ್ಯಮ್ಣೇ ಅಗ್ನಯೇ ಚ ॥26॥ ವಿ ನಃ ಸಹಸ್ರಂ ಶುರುಧೋ ರದಂತ್ವೃತಾವಾನೋ ವರುಣೋ ಮಿತ್ರೋ ಅಗ್ನಿಃ । ಯಚ್ಛಂತು ಚಂದ್ರಾ ಉಪಮಂ ನೋ ಅರ್ಕಮಾ ನಃ ಕಾಮಂ ಪೂಪುರಂತು ಸ್ತವಾನಾಃ ॥27॥ ಉದ್ವೇತಿ ಸುಭಗೋ ವಿಶ್ವಚಕ್ಷಾಃ ಸಾಧಾರಣಃ ಸೂರ್ಯೋ ಮಾನುಷಾಣಾಂ । ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ತಮಾಂಸಿ ॥28॥ ಉದ್ವೇತಿ ಪ್ರಸವೀತಾ ಜನಾನಾಂ ಮಹಾನ್ಕೇತುರರ್ಣವಃ ಸೂರ್ಯಸ್ಯ । ಸಮಾನಂ ಚಕ್ರಂ ಪರ್ಯಾವಿವೃತ್ಸನ್ಯದೇತಶೋ ವಹತಿ ಧೂರ್ಷು ಯುಕ್ತಃ ॥29॥ ವಿಭ್ರಾಜಮಾನ ಉಷಸಾಮುಪಸ್ಥಾದ್ರೇಭೈರುದೇತ್ಯನುಮದ್ಯಮಾನಃ । ಏಷ ಮೇ ದೇವಃ ಸವಿತಾ ಚಚ್ಛಂದ ಯಃ ಸಮಾನಂ ನ ಪ್ರಮಿನಾತಿ ಧಾಮ ॥30॥ ದಿವೋ ರುಕ್ಮ ಉರುಚಕ್ಷಾ ಉದೇತಿ ದೂರೇಅರ್ಥಸ್ತರಣಿರ್ಭ್ರಾಜಮಾನಃ । ನೂನಂ ಜನಾಃ ಸೂರ್ಯೇಣ ಪ್ರಸೂತಾ ಅಯನ್ನರ್ಥಾನಿ ಕೃಣವನ್ನಪಾಂಸಿ ॥31॥ ಯತ್ರಾ ಚಕ್ರುರಮೃತಾ ಗಾತುಮಸ್ಮೈ ಶ್ಯೇನೋ ನ ದೀಯನ್ನನ್ವೇತಿ ಪಾಥಃ ॥32॥ ಉದು ತ್ಯದ್ದರ್ಶತಂ ವಪುರ್ದಿವ ಏತಿ ಪ್ರತಿಹ್ವರೇ । ಯದೀಮಾಶುರ್ವಹತಿ ದೇವ ಏತಶೋ ವಿಶ್ವಸ್ಮೈ ಚಕ್ಷಸೇ ಅರಂ ॥33॥ ಶೀರ್ಷ್ಣಃಶೀರ್ಷ್ಣೋ ಜಗತಸ್ತಸ್ಥುಷಸ್ಪತಿಂ ಸಮಯಾ ವಿಶ್ವಮಾ ರಜಃ । ಸಪ್ತ ಸ್ವಸಾರಃ ಸುವಿತಾಯ ಸೂರ್ಯಂ ವಹಂತಿ ಹರಿತೋ ರಥೇ ॥34॥ ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್ । ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ॥35॥ ಬಣ್ಮಹಾ ಅಸಿ ಸೂರ್ಯ ಬಳಾದಿತ್ಯ ಮಹಾ ಅಸಿ । ಮಹಸ್ತೇ ಸತೋ ಮಹಿಮಾ ಪನಸ್ಯತೇಽದ್ಧಾ ದೇವ ಮಹಾ ಅಸಿ ॥36॥ ಬಟ್ ಸೂರ್ಯ ಶ್ರವಸಾ ಮಹಾ ಅಸಿ ಸತ್ರಾ ದೇವ ಮಹಾ ಅಸಿ । ಮಹ್ನಾ ದೇವಾನಾಮಸುರ್ಯಃ ಪುರೋಹಿತೋ ವಿಭು ಜ್ಯೋತಿರದಾಭ್ಯಂ ॥37॥ ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ । ದೂರೇದೃಶೇ ದೇವಜಾತಾಯ ಕೇತವೇ ದಿವಸ್ಪುತ್ರಾಯ ಸೂರ್ಯಾಯ ಶಂಸತ ॥38॥ ಸಾ ಮಾ ಸತ್ಯೋಕ್ತಿಃ ಪರಿ ಪಾತು ವಿಶ್ವತೋ ದ್ಯಾವಾ ಚ ಯತ್ರ ತತನನ್ನಹಾನಿ ಚ । ವಿಶ್ವಮನ್ಯನ್ನಿ ವಿಶತೇ ಯದೇಜತಿ ವಿಶ್ವಾಹಾಪೋ

ವಿಶ್ವಾಹೋದೇತಿ ಸೂರ್ಯಃ ॥39॥ ನ ತೇ ಅದೇವಃ ಪ್ರದಿವೋ ನಿ ವಾಸತೇ ಯದೇತಶೇಭಿಃ ಪತರೈ ರಥರ್ಯಸಿ । ಪ್ರಾಚೀನಮನ್ಯದನು ವರ್ತತೇ ರಜ ಉದನ್ಯೇನ ಜ್ಯೋತಿಷಾ ಯಾಸಿ ಸೂರ್ಯ ॥40॥ ಯೇನ ಸೂರ್ಯ ಜ್ಯೋತಿಷಾ ಬಾಧಸೇ ತಮೋ ಜಗಚ್ಚ ವಿಶ್ವಮುದಿಯರ್ಷಿ ಭಾನುನಾ । ತೇನಾಸ್ಮದ್ವಿಶ್ವಾಮನಿರಾಮನಾಹುತಿಮಪಾಮೀವಾಮಪ ದುಷ್ಷ್ವಪ್ನ್ಯಂ ಸುವ ॥41॥ ವಿಶ್ವಸ್ಯ ಹಿ ಪ್ರೇಷಿತೋ ರಕ್ಷಸಿ ವ್ರತಮಹೇಳಯನ್ನುಚ್ಚರಸಿ ಸ್ವಧಾ ಅನು । ಯದದ್ಯ ತ್ವಾ ಸೂರ್ಯೋಪಬ್ರವಾಮಹೈ ತಂ ನೋ ದೇವಾ ಅನು ಮಂಸೀರತ ಕ್ರತುಂ ॥42॥ ತಂ ನೋ ದ್ಯಾವಾಪೃಥಿವೀ ತನ್ನ ಆಪ ಇಂದ್ರಃ ಶೃಣ್ವಂತು ಮರುತೋ ಹವಂ ವಚಃ । ಮಾ ಶೂನೇ ಭೂಮ ಸೂರ್ಯಸ್ಯ ಸಂದೃಶಿ ಭದ್ರಂ ಜೀವಂತೋ ಜರಣಾಮಶೀಮಹಿ ॥43॥ ವಿಶ್ವಾಹಾ ತ್ವಾ ಸುಮನಸಃ ಸುಚಕ್ಷಸಃ ಪ್ರಜಾವಂತೋ ಅನಮೀವಾ ಅನಾಗಸಃ । ಉದ್ಯಂತಂ ತ್ವಾ ಮಿತ್ರಮಹೋ ದಿವೇದಿವೇ ಜ್ಯೋಗ್ಜೀವಾಃ ಪ್ರತಿ ಪಶ್ಯೇಮ ಸೂರ್ಯ ॥44॥ ಮಹಿ ಜ್ಯೋತಿರ್ಬಿಭ್ರತಂ ತ್ವಾ ವಿಚಕ್ಷಣ ಭಾಸ್ವಂತಂ ಚಕ್ಷುಷೇಚಕ್ಷುಷೇ ಮಯಃ । ಆರೋಹಂತಂ ಬೃಹತಃ ಪಾಜಸಸ್ಪರಿ ವಯಂ ಜೀವಾಃ ಪ್ರತಿ ಪಶ್ಯೇಮ ಸೂರ್ಯ ॥45॥ ಯಸ್ಯ ತೇ ವಿಶ್ವಾ ಭುವನಾನಿ ಕೇತುನಾ ಪ್ರ ಚೇರತೇ ನಿ ಚ ವಿಶಂತೇ ಅಕ್ತುಭಿಃ । ಅನಾಗಾಸ್ತ್ವೇನ ಹರಿಕೇಶ ಸೂರ್ಯಾಹ್ನಾಹ್ನಾ ನೋ ವಸ್ಯಸಾವಸ್ಯಸೋದಿಹಿ ॥46॥ ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ ಶಂ ಭಾನುನಾ ಶಂ ಹಿಮಾ ಶಂ ಘೃಣೇನ । ಯಥಾ ಶಮಧ್ವಂಛಮಸದ್ದುರೋಣೇ ತತ್ಸೂರ್ಯ ದ್ರವಿಣಂ ಧೇಹಿ ಚಿತ್ರಂ ॥47॥ ಅಸ್ಮಾಕಂ ದೇವಾ ಉಭಯಾಯ ಜನ್ಮನೇ ಶರ್ಮ ಯಚ್ಛತ ದ್ವಿಪದೇ ಚತುಷ್ಪದೇ । ಅದತ್ಪಿಬದೂರ್ಜಯಮಾನಮಾಶಿತಂ ತದಸ್ಮೇ ಶಂ ಯೋರರಪೋ ದಧಾತನ ॥48॥ ಯದ್ವೋ ದೇವಾಶ್ಚಕೃಮ ಜಿಹ್ವಯಾ ಗುರು ಮನಸೋ ವಾ ಪ್ರಯುತೀ ದೇವಹೇಳನಂ । ಅರಾವಾ ಯೋ ನೋ ಅಭಿ ದುಚ್ಛುನಾಯತೇ ತಸ್ಮಿಂತದೇನೋ ವಸವೋ ನಿ ಧೇತನ ॥49॥ ಸೂರ್ಯೋ ನೋ ದಿವಸ್ಪಾತು ವಾತೋ ಅಂತರಿಕ್ಷಾತ್ । ಅಗ್ನಿರ್ನಃ ಪಾರ್ಥಿವೇಭ್ಯಃ ॥50॥ ಜೋಷಾ ಸವಿತರ್ಯಸ್ಯ ತೇ ಹರಃ ಶತಂ ಸವಾ ಅರ್ಹತಿ । ಪಾಹಿ ನೋ ದಿದ್ಯುತಃ ಪತಂತ್ಯಾಃ

